# ಸಪ್ತಗಿರಿ

ಸೆಪ್ಟಂಬರ್ 1983

ಬೆಲೆ ರೂ 1-00



ತಿರುಮಲ ತಿರುಪತಿ ದೇವಸ್ಥಾನಗಳ ಮಾಸ ಪತ್ರಿಕೆ



ವರಮಣಿಗಳಿಂದೆಸೆವ ಮೌಳಿಯ
ಸರಸಿಜಾರಿಯ ಕಿರಣದೋಳಿಯ
ವಿರಚಿಸಿದ ಸಿಂಧೂರ ಭಾಳದಿ ಕುಣಿವ ಕುಂತಳದ
ಕರಿ ನಿಭಾಕೃತಿಯೆನಿಪ ವದನದ
ಕರದ ಪಾಶದ ಮೋದಕದ ವಿ
ಸ್ತರದ ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವ

ಗಜಮುಖನೆ ಮೆರೆವೇಕದಂತನೆ
ನಿಜಗುಣಾನ್ವಿತ ಪರಶುಧಾರನೆ
ರಜತಗಿರಿಗೊಡೆಯನ ಕುಮಾರನೆ ವಿದ್ಯೈವಾರಿಧಿಯೆ
ಅಜನು ಹರಿ ರುದ್ರಾದಿಗಳು ನೆರೆ
ಭಜಿಸುತಿಹರನವರತ ನಿನ್ನನು
ತ್ರಿಜಗವಂದಿತಗಣಪ ಮಾಳ್ಪುದು ಮತಿಗೆ ಮಂಗಳವ

— ಕುಮಾರವ್ಯಾಸ.

**ಸಂದರ್ಶಿಸಿ!** **ಅನುಗ್ರಹೀತರಾಗಿರಿ!!**

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ



## ನವರಾತ್ರಿ ಬ್ರಹ್ಮೋತ್ಸವಗಳು 1983
### ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 6–10–83 | ಗುರು | — | ಅಂಕುರಾರ್ಪಣೆ |
| 7–10–83 | ಶುಕ್ರ | ಬಂಗಾರದ ತಿರುಚ್ಚಿ ಉತ್ಸವ | ದೊಡ್ಡ ಶೇಷವಾಹನ |
| 8–10–83 | ಶನಿ | ಚಿಕ್ಕಶೇಷವಾಹನ | ಹಂಸವಾಹನ |
| 9–10–83 | ಭಾನು | ಸಿಂಹವಾಹನ | ಮುತ್ತಿನ ಪಲ್ಲಕ್ಕಿವಾಹನ |
| 10–10–83 | ಸೋಮ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 11–10–83 | ಮಂಗಳ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಮಕರಕಂಠಿ, ಲಕ್ಷ್ಮೀಹಾರಾದ್ಯಾಭರಣಗಳೊಡನೆ **ಗರುಡವಾಹನ** |
| 12–10–83 | ಬುಧ | ಹನುಮದ್ವಾಹನ, ಸಂಜೆ ವಸಂತೋತ್ಸವ | ಗಜವಾಹನ |
| 13–10–83 | ಗುರು | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 14–10–83 | ಶುಕ್ರ | **ರಜತ ರಥೋತ್ಸವ** | ಅಶ್ವವಾಹನ |
| 15–10–83 | ಶನಿ | ಪಲ್ಲಕ್ಕಿ ಉತ್ಸವ, ಅವಭೃತ. | ತಿರುಚ್ಚಿ ವಾಹನ. |

ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಂಜೆ ವಿಶೇಷ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ.- ಸಂಗೀತ, ಹರಿಕಥೆಗಳ ವಿಶೇಷ ಆಕರ್ಷಣೆಗಳಿರುತ್ತವೆ.

**ತಿರುಮಲೆ ತಿರುಪತಿ ದೇವಸ್ಥಾನಗಳು.**

**ನೀವೂ ಬನ್ನಿ,** **ನಿಮ್ಮವರನ್ನೂ ಕರೆತನ್ನಿ.**



ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ- ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥

ಸಂಪುಟ ೧೪] ಸೆಪ್ಟೆಂಬರ್ ೧೯೮೩ [ಸಂಚಿಕೆ ೪

# ವಿಷಯಸೂಚಿ

# ಸಂಪಾದಕೀಯ

ಈ ಪ್ರಪಂಚದಲ್ಲಿ ಅಧಿಕಾರ, ಧನ, ಗುಣ, ವಂಶ, ರೂಪಗಳೆಲ್ಲ ಪ್ರತಿಷ್ಠೆಯನ್ನು, ಗೌರವವನ್ನು, ಹೆಚ್ಚಿಸುವ ಅಂಶಗಳು. ಇವುಗಳಲ್ಲಿ ಯಾವುದೇ ಒಂದು ಇದ್ದರೂ ಅದು ಮನುಷ್ಯನಿಗೆ ಆತ್ಮಪ್ರತ್ಯಯವನ್ನುಂಟುಮಾಡಿ ಆ ಮೂಲಕವಾಗಿಯೇ ಅಹಂಕಾರಕ್ಕೆ ದಾರಿಮಾಡಿಕೊಡುತ್ತದೆ. ಇವುಗಳೆಲ್ಲವೂ ಸೇರಿದಾಗಲಂತೂ ಅವನನ್ನು ಹಿಡಿಯುವವರೇ ಇಲ್ಲವಾದಂತಾಗಿ ಅವನತಿಯತ್ತ ಜಾರುವಿಕೆಯುಂಟಾಗುವುದೆಂಬುದು ಸ್ಪಷ್ಟವೇ ಹೌದು. ಇಂತಹವನು ಇತರರನ್ನು ಅವಹೇಳನ ಮಾಡುತ್ತ ತನ್ನ ಕಾಲಮೇಲೆ ತಾನೇ ಕಲ್ಲು ಹಾಕಿಕೊಳ್ಳುತ್ತಾನೆ. ಇಂತಹ ಪೈತ್ಯ ಹೆಚ್ಚಿದಾಗಲೇ ಶಿವಜಟಾಮಣಿಯೆಂದೂ, ತಾರಾಧಿಪತಿಯೆಂದೂ, ಓಷಧೀಶ್ವರನೆಂದೂ, ಆದಿಪುರುಷಹೃದಯಾಧಿಜಾತನೆಂದು ಗರ್ವ ಹೊಂದಿ ಚಂದ್ರನು ವಿನಾಯಕನನ್ನು ನೋಡಿ ಅಪಹಾಸ್ಯ ಮಾಡಿದ್ದೂ, ಪುನಃ ಅವನನ್ನೇ ಶರಣುಹೊಂದಿದ್ದೂ ನಡೆದದ್ದು, ಬಲಿಚಕ್ರವರ್ತಿ ತಾನು ದಾತನೆಂಬ ಗರ್ವದಿಂದ ಏನನ್ನಾದರೂ ಕೊಡಬಲ್ಲೆ ಎಂದದ್ದು, ವಾಮನನ ತ್ರಿವಿಕ್ರಮ ರೂಪಕ್ಕೆ ಎದುರು ನಿಲ್ಲಲಾರದೆ ಶರಣು ಹೊದಿದ್ದು ಉಲ್ಲೇಖನೀಯ. ವಿನಾಯಕ ವಾಮನರೀರ್ವರೂ ಸುರೂಪಿಗಳಲ್ಲವೆಂಬುದು ಗಮನಾರ್ಹ.

ಬಹಿರಂಗರೂಪಸೌಂದರ್ಯ ನಶ್ವರವೆಂಬುದೂ ಅಂತರಂಗದ ಸತ್ವವೇ ಶಾಶ್ವತವಾದುದು ಎಂಬುದೂ ಮೇಲಿನ ಎರಡೂ ಕಥೆಗಳಲ್ಲಿ ಖಚಿತವಾಗುವ ಅಂಶವಾಗಿದೆ. ದೇವತೆಗಳ ಸುಂದರರೂಪರಾಶಿಯ ನಡುವೆ ಈ ವಿನಾಯಕನ ಸೃಷ್ಟಿಯೇ ಸಮಾಜಕ್ಕೆ ಒಂದು ಸಂದೇಶದಂತಿದೆ-

ನಾಯಕತ್ವಕ್ಕೆ ಬೇಕಾದದ್ದು ರೂಪಮಾತ್ರವೇ ಅಲ್ಲ. ಕಾರ್ಯದೀಕ್ಷೆ, ಸೂಕ್ಷ್ಮ ದೃಷ್ಟಿ ಹಾಗೂ ಸದಸದ್ವಿವೇಕ. ಇವೆಲ್ಲ ಅಂತರಂಗಕ್ಕೆ ಸಂಬಂಧಿಸಿದ ವಿಷಯಗಳೆ. ವಿನಾಯಕನಿಗೆ ಸಂಬಂಧಿಸಿದ ಯಾವ ಕಥೆಯಲ್ಲೂ ಆತನಿಗೆ ಆತುರ, ಆವೇಶಗಳಿದ್ದಂತೆ ಹೇಳಿಲ್ಲ. ಷಣ್ಮುಖನು ಮಯೂರವಾಹನನಾಗಿ ವಿಶ್ವಪ್ರದಕ್ಷಿಣೆಗೆ ಹೊರಟಾಗ ವಿನಾಯಕನು ಲೋಕಜನನೀಜನಕರಾದ ಶಿವಪಾರ್ವತಿಯರಿಗೆ ಪ್ರದಕ್ಷಿಣೆ ಮಾಡಿ ಸೂಕ್ಷ್ಮ ಮತಿಯಿಂದ ಶೀಘ್ರಫಲ ಹೊಂದಿದ. ಇಂತಹ ಪ್ರತ್ಯುತ್ಪನ್ನಮತಿ ನಾಯಕನಿಗಿರಬೇಕಾದ ಅನಿವಾರ್ಯ ಲಕ್ಷಣಗಳಲ್ಲಿ ಒಂದು. ಇದರ ಸಂಕೇತವೇ ಇರಬೇಕು ವಿನಾಯಕನಿಗೆ ಸಿದ್ಧಿ ಬುದ್ಧಿ ಎಂಬ ಇಬ್ಬರು ಹೆಂಡತಿಯರು ಎನ್ನುವುದು.

ಗಜವದನವೂ ಮೂಷಕ ವಾಹನವೂ ಆ ದೇವನ ಸಮರಸಭಾವನೆಗೆ ನಿದರ್ಶನವೆಂದೂ ಭಾವಿಸಬಹುದು. ಅತಿದೊಡ್ಡ ಪ್ರಾಣಿಯನ್ನು ತಲೆಯಾಗಿಯೂ, ಅತಿಚಿಕ್ಕ ಜೀವಿಯನ್ನು ವಾಹನರೂಪವಾಗಿಯೂ ರೂಪಿಸಿಕೊಳ್ಳುವುದು ಸರ್ವಜೀವಸಮಭಾವನೆಯನ್ನು ಸರ್ವಾಂತರ್ಯಾಮಿತ್ವವನ್ನು ನಿರೂಪಿಸುತ್ತವೆ. ಯಾವುದೇ ರೂಪದಲ್ಲಿದ್ದರೂ ಭಗವಂತನೊಬ್ಬನೇ ಅಲ್ಲವೇ! ಮೇಲಾಗಿ ಈ ಆನೆ ಇಲಿಗಳೆರಡೂ ಸಸ್ಯ ಶತ್ರುಗಳು ಆಗಿರುವುದರಿಂದ ಅವುಗಳನ್ನು ಅಂಕೆಯಲ್ಲಿಟ್ಟುಕೊಂಡ ದೇವತೆ ನಿಜವಾಗಿಯೂ ಕ್ಷೇತ್ರಪಾಲಕನೇ ಹೌದು.

ಇಷ್ಟು ವಿಶೇಷಗಳಿರುವ ದೇವರು ಗಣನಾಥನಾದಂತೆಯೇ ಇಂತಹ ಬುದ್ಧಿಜೀವಿ ವಿಘ್ನನಾಯಕನಾಗಿರುವುದರಲ್ಲಿ ಆಶ್ಚರ್ಯವಿಲ್ಲ. ಸಾಣೆಹಿಡಿಯದ ವಜ್ರಕ್ಕೆ ಬೆಲೆಯಿಲ್ಲವೆನ್ನುತ್ತಾರೆ. ದೈವ. ವಿಘ್ನಗಳು ಮಾನವನ ಸಾಧನೆಗೆ ಪರೀಕ್ಷೆಗಳು. ವಿಘ್ನಗಳನ್ನು ಊಹಿಸಿಕೊಂಡು ತಾಳುವ ಶಕ್ತಿಯಿಲ್ಲದಿರುವುದರಿಂದಲೇ ವಿಘ್ನಗಳನ್ನೇ ಒಡ್ಡದಿರು ಎಂದು ಬೇಡಿಕೊಳ್ಳುತ್ತೇವೆ. ನಾನು ಇರುವೆನೆಂದು ತಿಳಿಸುತ್ತ ಬಂದರೆ ಭರಿಸುವುದು ಕಷ್ಟವಾದ್ದರಿಂದ ನಾವೇ ಕರೆದು ಹಬ್ಬ ಮಾಡಿ ಇನ್ನು ತೊಂದರೆ ನೀಡದಿರು ಎಂದು ಹರಕೆ ಹೊರುತ್ತಿದ್ದೇವೆ, ಹಲವಾರು ವ್ರತಕ್ರತುಗಳ ಸಂದರ್ಭದಲ್ಲಿ 'ನೆರವು ಬೇಕೆ ಎಂದು ಕೇಳಿದಾಗ ತೊಂದರೆ ಕೊಡದಿದ್ದರೆ ಸಾಕು' ಎಂದಂತೆ. ಇದೂ ಹಾಗೇ ಎನ್ನಿಸುತ್ತದೆ ಬಾಹ್ಯದೃಷ್ಟಿಗೆ.

ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ
ಕವಿಂ ಕವೀನಾಮುಪಮಃಶ್ರವಸ್ತಮಮ್ ।
ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತಃ
ಆನಶ್ರೃಣ್ವನ್ನೂತಿಭಿಸ್ಸೀದ ಸಾಧನಂ ॥

## ವಾಮನಜಯಂತಿ

ಅಹೋ! ಅಚಿಂತ್ಯಾದ್ಭುತರೂಪಾಯ ವಾಮನಾಯ ತ್ರಿವಿಕ್ರಮ ರೂಪಾಯ ನಮಃ! ಭಗವಂತನ ಆವಿರ್ಭಾವ ವಿಧಾನ ಗಳನ್ನು ಲೀಲಾವಿಭೂತಿಯಲ್ಲಿ ಅನುಭ ವಿಸುವುದೇ ಮಹದಾನಂದಕಾರಕ. ಅವನ ಒಂದೊಂದು ರೂಪವೂ ಸುಂದರ, ವಿಚಿತ್ರ, ಅ ನಿ ರ್ ವ ಚ ನೀ ಯ. ಪ್ರತಿಯೊಂದು ಆವಿರ್ಭಾವವೂ ವಾಙ್ಮನಸಾ ಅವರ್ಣ ನೀಯವಾದವು ಅವನ ಮಾಯಾಚೇಷ್ಟೆ ಗಳು. ಆದ್ದರಿಂದಲೇ ಅಂತರ್ಮುಖಿಗಳೂ, ಭಗವದನುಭವಶಾಲಿಗಳೂ ಆದವರು ಭಗ ವಂತನ ಒಂದೊಂದು ರೂಪಕ್ಕೂ, ಭಂಗಿಗೂ ಮನ ಸೋತು ಅಹೋ! ಅಹೋ! ಎಂದು ಆಶ್ಚರ್ಯದಿಂದ ಉದ್ಗಾರ ತೆಗೆದಿರುವುದು.

ಶ್ರುತಿ ಸ್ಮೃತಿ ಗ ಳೆಂ ದು ವಿಖ್ಯಾತ ವಾಗಿರುವ ವೇದಪುರಾಣೇತಿಹಾಸಗಳಲ್ಲಿ ಭಗ ವಂತನನ್ನು ವರ್ಣಿಸುವಾಗ ಅವನು ಅಣುವಿ ನಲ್ಲಿ ಅಣು, ಮಹತ್ತಿಗೂ ಮಹಾನ್ ಎಂದು ಹೇಳಿರುವುದು. ಏಕಕಾಲದಲ್ಲಿ ಒಂದೇ ದೇಶದಲ್ಲಿ ಕಣ್ಣು ಮುಚ್ಚಿ ಕಣ್ಣು ತೆರೆ ಯುವುದರಲ್ಲಿ ಅವನ ಈ ಸತ್ಯವನ್ನು ಕಂಡು ಚಕಿತರಾಗಿದ್ದಾರೆ. ಈ ಸತ್ಯದ ದರ್ಶನ ವನ್ನು ಅನುಭವಿಸಿ ವಿಸ್ಮಿತರಾಗುವ ಒಂದು ಸನ್ನಿವೇಶ ಬಲಿ ಚಕ್ರವರ್ತಿಯ ಯಾಗ ಮಂಟಪದಲ್ಲಿ ಒದಗಿತು.

ಬಲಿ ಚಕ್ರವರ್ತಿಯು ಇಂದ್ರನನ್ನೂ ಗೆದ್ದವನು, ಶತಾಶ್ವಮೇಧಗಳನ್ನು ಪೂರೈಸಿ ಇಂದ್ರನ ಆಸನದಲ್ಲಿ ಪ್ರತಿಷ್ಠಿತನಾಗಿಬಿಡ ಬೇಕೆಂದು ಹೆಬ್ಬಯಕೆಯುಳ್ಳವನು. ಕೊನೇ ಯಾಗ, ಕೊನೇ ಅವಸರ. ಯಾಗಾಂತ್ಯ ದಲ್ಲಿ ಬೇಡಿದವರಿಗೆ ಬೇಡಿದುದೆಲ್ಲವನ್ನೂ ಕೊಡುಗೈಯಿಂದ ದಾನಮಾಡುವವನು. ಅಖಂಡ ಭೂ ಸಾ ಮ್ರಾ ಜ್ಯ ಕ್ಕೆ ಅಧಿಪ ನಾದವನು, ಮಹೇಂದ್ರಪದವಿಯನ್ನು ಪ ಡೆ ಯ ಲಿ ರು ವ ವ ನು, ಅಷ್ಟು ಇಷ್ಟು ಕೊಡವುದೇ! 'ಕೊಡಬೇಕು, ಗರಹಿಡಿದ ಹಾಗೆ ಕೊಡಬೇಕು'. ಕೊಟ್ಟವನಿಗೂ ತೃಪ್ತಿ ಯಾಗಬೇಕು, ಕೊಡುವವನಿಗೂ ಹಿಡಿಸಲಾರ ದಷ್ಟು ತೃಪ್ತಿಯುಂಟಾಗಬೇಕು. ಪ್ರಸಂಡ ಬಲಿಯ ದಾನದ ಮುಂದೆ ಚಿಕ್ಕದ ಬೇರ ಗಾಯಿತು, ಗೂಗಿನ ಮೇಲೆ ಬೆರಳಿಟ್ಟು ತಲೆ ದೂಗಿತು.

ಬಲಿ ಚಕ್ರವರ್ತಿಯು ಪ್ರಹ್ಲಾದನ ವಂಶಸ್ಥ. ಪ್ರಹ್ಲಾದನಿಗೆ ಒಲಿದು ನರ ಹರಿಯು ಅವನ ವಂಶಸ್ಥರನ್ನು ಮುಂದೆ ಕೊಲ್ಲುವುದಿಲ್ಲವೆಂದು ಮಾತುಕೊಟ್ಟಿದ್ದಾನೆ. ಬಲಿಯು ದ ರುಳನೂ ಅಲ್ಲ, ನಾಸ್ತಿಕನೂ ಅಲ್ಲ. ಭಗವದ್ವೇಷವಿಲ್ಲ. ಆದರೆ ಅಹಂಕಾರಿ ಮಾತ್ರ. ಆಸೆಯಲ್ಲಿ ಮುಳುಗಿ ತನ್ನ ಚಕ್ರಾಧಿಪತ್ಯಕ್ಕೆ ಇಂದ್ರನ ಒಡ್ಡೋಲಗ ವನ್ನು ಕಬಳಿಸಬೇಕೆಂಬ ಹೆಬ್ಬಯಕೆ. ಇದಕ್ಕು ಕು ಲ ಗು ರು ಗ ಳೂ, ಅಸುರ ಪೂಜ್ಯರೂ, ಬುದ್ಧಿ ಯುಕ್ತಿಗಳಲ್ಲಿ ಸಾಟಿ ಯಿಲ್ಲದವರೂ ಆದ ಶುಕ್ರಾಚಾರ್ಯರ ನೆರವು ಬೇರೆ.



# ವಾಮನ - ತ್ರಿವಿಕ್ರಮ

ಇಂದ್ರನ ಅವಸ್ಥೆ ಹೇಳತೀರದು. ಅವನು ಸ್ವರ್ಗಾಧಿಪತಿಯಾದರೂ ಶುದ್ಧ ಸತ್ವದ ಅಂತಃಕರಣದವನಲ್ಲ. ಅದೇನೋ ಅವನ ಮೇಲೆ ಎಲ್ಲಾ ದೇವರುಗಳ ಪಕ್ಷಪಾತ. ಬುದ್ಧಿ ಕಲಿಸಲೋಸುಗ ಆಗಾಗ ಅವನನ್ನು ಕಷ್ಟಗಳಲ್ಲಿ ಅದ್ದಿ, ನಂತರ ತಿದ್ದಿ, ಅವನ ಗದ್ದುಗೆಗೆ ಅವನನ್ನು ಅಂಟಿಸಿ ಕೂರಿ ಸುತ್ತಾರೆ. ಈಗಲೂ ಅಂಥದೇ ಸನ್ನಿವೇಶ.

"ಪರಿತ್ರಾಣಾಯ ಸಾಧೂನಾಂ ವಿನಾ ಶಾಯ ಚ ದುಷ್ಕೃತಾಮ್" ಇದು ಭಗ ವಂತನ ದೀಕ್ಷೆ. ಭಗವಂತನನ್ನಿನಿಕೊಂಡವನು ಶ್ರೀಮಹಾವಿಷ್ಣು ಮಾತ್ರ. ಅವನು ಆರ್ತತ್ರಾಣಪರಾಯಣ. ಬ್ರಹ್ಮರುದ್ರೇಂ ದ್ರಾದಿಗಳಿಗೆಲ್ಲಾ ಸಂಕಟ ಬಂದಾಗ ಲೆಲ್ಲಾ ವೆಂಕಟರಮಣನ ಸ್ಮರಣೆ. ಒಡನೆ ಆಗೋ ಭಕ್ತರ ಪಕ್ಷಪಾತಿ ಓಡಿ ಬಂದ, ಕಾದು ಅವರನ್ನು ಸಲಹಿದ. ಇಂತಹ ಒಂದೊಂದು ಸಮಯದಲ್ಲೂ ದುಷ್ಟರ ಶಿಕ್ಷೆ ಯಾಗಿದೆ, ಅವರ ಸಂಹಾರವೇ ಆಗಿದೆ. ಆದರೆ ಈಗ ಬಲಿಯು ಶುಕ್ರಾಚಾರ್ಯರ ಮಂತ್ರಿತ್ವ ದಲ್ಲಿ ಬಲು ಚಾಣಾಕ್ಷನಾಗಿ ಇಂದ್ರಲೋಕ ವನ್ನು ವಿಹಿತಮಾರ್ಗದಲ್ಲಿ ಗೆಲ್ಲಲು ಯತ್ನಿ ಸಿದ್ದಾನೆ. ಯುದ್ಧ ಮಾಡಿದರೆ ಶತ್ರುತ್ವ, ದೈವದ್ರೋಹ. ಯಜ್ಞ ಯಾಗ ಮಾಡಿದರೆ ಆ ಮಹಾವಿಷ್ಣುವೂ ಎದುರು ಬೀಳುವುದು ಹೇಗೆ? ಇದು ಆ ಪರಬ್ರಹ್ಮನಿಗೇ ಒಂದು ಸಮಸ್ಯೆ.

ಬಲಿಯ ಯಾಗವು ಪೂರ್ತಿಯಾಗುತ್ತ ಲಿದೆ. ಅಲ್ಲೊಂದು ಪುಟ್ಟರೂಪ ಸಭೆಗೆ ನಡೆದು ಬರುತ್ತಲಿದೆ. ಚೋಟುದ್ದ ಬಾಲಕ, ಬ್ರಾಹ್ಮಣ ವಟು, ಮೌಂಜ್ಯಜಿನದಂಡಧರ ನಾಗಿ, ಯಜ್ಞೋಪವೀತಧಾರಿಯಾಗಿ, ಕಮಂಡಲು ಹಿಡಿದು ಕಾಣಿಸುತ್ತಿದ್ದಾನೆ. ಇದೇನು ಇಂಥಾ ಪುಟ್ಟರೂಪ! ಎಲ್ಲೂ ಕಾಣಸಿಗದ ರೂಪ. ಆದರೆ ಇಷ್ಟು ತೇಜಸ್ಸು!

ಶ್ರೀ ಎಸ್. ನರಸಿಂಹಾಚಾರ್ಯ

# "ಬಾಳ ಪಯಣ"

ತುಂಬು ಚಂದಿರ ಮೂಡಿ ಬರಲು
ಹಾಲ ಹೊಳೆಯೇ ಹರಿಯಿತು ।
ಬೆಳ್ಳಿ ಬೆಳಕನು ಕಂಡ ಶರಧಿ
ಮೊರೆದು ಮೊರೆದು ಉಬ್ಬಿತು ॥

ಕಡಲ ಸಿರಿಯ ಕಂಡು ಬೆಸ್ತರು
ಪಾನದಂಗಡಿ ಸೇರ್ದರು ।
ಸುರೆಯನುಂಡು ಮತ್ತರಾಗಿ
ದೋಣಿಯನು ತಾವೇರ್ದರು ॥

ಮೀಂಟಿ ಮೀಂಟಿ ಹುಟ್ಟು ಮರವ
ಜವದಿ ಪಯಣವ ಹೊರಟರು ।
ದಾಂಟಿ ದಾಂಟಿ ಇರುಳನೆಲ್ಲಾ
ಮೂಡಲಲಿ ರವಿ ಕಂಡರು ॥

'ದೂರ ತೀರವ ಸೇರಿ ನಾವು
ಬೇರೆ ಲೋಕವ ಕಂಡೆವು ।
ನಾವೆ ಧೀರರು ನಾವೆ ಶೂರರು'
ಎನುತ ಕಂಗಳ ತೆರೆದರು ॥

ಏನಿದಚ್ಚರಿ ಮನಕೆ ಕಿರಿಕಿರಿ
ಇದ್ದ ತೀರದೆ ಇರುವೆವು ।
ಮತ್ತರಾಗಿ ಕನಸ ಕಟ್ಟಿ
ವ್ಯರ್ಥರಾಗಿ ಸತ್ತೆವು ॥

ದೋಣಿ ಬಿಗಿದ ಹಗ್ಗ ಬಿಚ್ಚದೆ
ಹುಟ್ಟು ಹಾಕಿ ಸೋತೆವು
ಇಲ್ಲು ಸಲ್ಲದೆ – ಅಲ್ಲು ಸಲ್ಲದೆ
ಮೂಢರಾದೆವು ಎಂದರು

ನಿಮ್ಮ ಬಾಳ ಪಯಣದಲ್ಲಿಯು
ಆಶಾ – ಪಾಶವ ಬಿಚ್ಚಿರಿ ।
ಬೀಸು ಗಾಳಿಗೆ ನೌಕೆಯಾಗ
ಎಂತು ನಡೆವುದು ನೋಡಿರಿ ॥

ಸರ್ವ ತ್ಯಾಗವು ಪರಕೆ ಹಾದಿ
ಎಂಬ ನೀತಿಯು ಅರಿಯಿರಿ
ದೋಣಿ ಬಿಗಿದ ಹಗ್ಗ ಹರಿದು
ಬಾಳ ಪಯಣವ ಬೆಳಸಿರಿ ॥

( ಶ್ರೀ ರಾಮಕೃಷ್ಣ ಪರಮಹಂಸರ ಕಥೆಯನ್ನು ಆಧರಿಸಿ )

—" ಕವಿತಾಕೃಷ್ಣ "

ಬ್ರಹ್ಮತೇಜಸ್ಸು ಮೂರ್ತಿವೆತ್ತು ಇವನ ಸಭೆಗೆ ನಡೆದು ಬಂದಂತಿದೆ. ಅಹೋ ರೂಪಂ! ಅಹೋ ತೇಜಃ! ಮಹದಾಶ್ಚರ್ಯ, ತುಂಬು ಸಭೆಯಲ್ಲಿ ಈ ವಾಮನಮೂರ್ತಿಯನ್ನು ನೋಡುತ್ತಿದ್ದಂತೆ ಕುತ್ಸಿತ ಬುದ್ಧಿಯಿಲ್ಲದೆ ಪೂಜ್ಯಭಾವನೆ ಹೊರಹೊಮ್ಮಿತ್ತು. ಆ ವಾಮನ ಮೂರ್ತಿಯು ಸಭೆಗೆ ಕಾಲಿಡುತ್ತಿದ್ದಂತೆ ಶುಕ್ರಾಚಾರ್ಯರಿಗೆ ಏನೋ ಅನುಮಾನ. ಅವನ ಉರುಪ್ರದೇಶದಲ್ಲಿ ಅಜಿನದ ಹಿಂದೆ ಮರೆಯಾಗಿ ಶ್ರೀದೇವಿಯು ಕಂಡೂ ಕಾಣದಂತೆ ಆದಳು. ಓಹೋ! ಶ್ರೀಮನ್ನಾರಾಯಣನೇ ಈ ಕುಬ್ಜಾಕೃತಿಯ ರೂಪದಲ್ಲಿ ಆಗಮಿಸಿ ಏನೋ ಮಾಯಾ ಚೇಷ್ಟೆಯನ್ನು ಮಾಡುವವನಿದ್ದಾನೆಂದೂಹಿಸಿ ರಾಜನಿಗೆ ಎಚ್ಚರಿಕೆಯೆಂದರು. ಹಾಗನ್ನುತ್ತಿದ್ದರೂ ಆ ಬಾಲಬ್ರಹ್ಮಚಾರಿಯು ಸಭಾಪ್ರವೇಶ ಮಾಡುತ್ತಿದ್ದಂತೆ ರಾಜ, ಮಂತ್ರಿ, ಸಭಿಕರು ಎಲ್ಲರೂ ತಮ ಗರಿವಿಲ್ಲದೆಯೇ ಧಿಗ್ಗನೆದ್ದು ನಿಂತರು. ರಾಜನು ಅರ್ಘ್ಯಪಾದ್ಯಗಳಿಂದ ಸತ್ಕರಿಸಿ ಬ್ರಹ್ಮಚಾರಿಯ ಅಭೀಷ್ಟವೇನೆಂದು ಕೇಳಿದನು. ಅಕಾರ ಶಬ್ದವಾಚ್ಯನಾದ ಶ್ರೀಹರಿಯ ವಟುರೂಪ ಅಕಾರದಂತೆಯೇ ಹ್ರಸ್ವ. ಈ ಕುಬ್ಜಮೂರ್ತಿಯು ತನ್ನ ಹೆಜ್ಜೆಯ ಮೂರು ಅಳತೆ ನೆಲವನ್ನು ಮಹಾಪ್ರಸಾದವಾಗಿ ಬೇಡಿತು. ದಾನವ ರಿಪುವಿನ ಕಪಟವು ಶುಕ್ರಾಚಾರ್ಯರಿಗೂ ಅಚ್ಚರಿಯಾಯಿತು. ಏನೋ ಮೋಸವೆಂದರು, ಏನು ಮೋಸ ತಿಳಿಯದಾದರು. ಚಕ್ರವರ್ತಿಯು ದಂಗಾದ. ಎಂಥಾ ಅಲ್ಪ ಯೋಚನೆ, ಚಕ್ರವರ್ತಿಗೆ ಇಷ್ಟುಕೊಡುವುದು ನಾಚಿಕೆಯ ಪ್ರಸಂಗ, ತುಂಬಾ ಹಾಸ್ಯಾಸ್ಪದ. ಕೊಡುವವನಿಗೆ, ತೆಗೆದುಕೊಳ್ಳುವವನಿಗೆ ಇಬ್ಬರಿಗೂ ಹೀನಾಯವೆಂದು ಅವನ ಭಾವನೆ. ಆದರೆ ಆ ಕುಬ್ಜಮೂರ್ತಿಗೆ ಅಷ್ಟೇ ಬೇಕು, ಅದೇ ಬೇಕು. ವಿಧಿಯಿಲ್ಲದೆ ಬಲಿ ಚಕ್ರವರ್ತಿಯು ವಾಮನನಿಗೆ ಕೇಳಿದುದನ್ನು ಧಾರೆಯೆರೆದ.

ಅಕಾರ ಶಬ್ದವಾಚ್ಯನಾದ ವಾಮನ ಅಕಾರದಷ್ಟೇ ಹ್ರಸ್ವನಾಗಿ ಕಾಣಿಸಿದ

(36ನೇ ಪುಟ ನೋಡಿ)

# ತಮಿಳುನಾಡಿನ ಮೂವರು ಸಂತರು

ಭರತಖಂಡದ ತಮಿಳುನಾಡಿನ ಶ್ರೀವೈಷ್ಣವ ಭಕ್ತರನ್ನು ಆಳ್ವಾರರೆಂಬ ಹೆಸರಿನಿಂದ ಕರೆಯುತ್ತಾರೆ. ಆಳ್ವಾರ್ ಎಂಬುವ ಪದಕ್ಕೆ ಮುಳುಗಿದವರು ಎಂಬರ್ಥ. ಭಗವಂತನ ಧ್ಯಾನದಲ್ಲಿ ಅವನ ಭಕ್ತಿಯಲ್ಲಿ ಸದಾನಿರತರಾದವರು ಎಂಬುವುದಾಗಿ ನಾವು ಅರ್ಥ ಮಾಡಬಹುದು. ಭಕ್ತಿಯ ಪರಾಕಾಷ್ಠೆಯ ಅನುಭವದಲ್ಲಿ ಪರಮ ಪ್ರೇಮದಿಂದ ಆಳ್ವಾರರು ಹಾಡಿದ ಪ್ರಬಂಧಗಳಿಗೆ ನಾಲಾಯಿರ ದಿವ್ಯಪ್ರಬಂಧ ಅಥವಾ ದ್ರಾವಿಡ ವೇದ ಎಂಬುವ ಹೆಸರುಂಟು. ತಮ್ಮ ಭಕ್ತಿ ಪ್ರಪತ್ತಿ ಶರಣಾಗತಿ ಮಾರ್ಗಗಳಿಂದ ಪರತತ್ತ್ವವನ್ನು ಸಾಕ್ಷಾತ್ಕಾರ ಮಾಡಿಕೊಂಡು ಅವರ ದಿವ್ಯ ಅನುಭವಗಳನ್ನು ಮಾನವರ ಹಿತಕ್ಕಾಗಿ ಹಾಡಿದ ಪ್ರಬಂಧಗಳೇ ನಮ್ಮನ್ನು ಮೋಕ್ಷದತ್ತ ಕೊಂಡೊಯ್ಯುವ ಪಾಶುರಗಳು.

ಆಳ್ವಾರರು ತತ್ತ್ವವನ್ನು ಬೋಧಿಸಲು ಬಂದವರಲ್ಲ. ಪ್ರಾಚೀನವಾದ ಭಾಗವತಪಂಥವನ್ನು ಲೋಕಹಿತಕ್ಕಾಗಿ ನೀಡಲು ಬಂದಂಥ ದಿವ್ಯ ಜ್ಞಾನಿಗಳು, ನಿತ್ಯಸೂರಿಗಳು. ಮಹಾನುಭಾವರು, ಮಹಾವಿಷ್ಣುಭಕ್ತರು. ಬಹುಶಃ ಕಿ.ಶ. ಐದು ಹಾಗೂ ಏಳನೆಯ ಶತಮಾನದಲ್ಲಿ ಇವರು ಇದ್ದಿರಬಹುದು. ಆಳ್ವಾರುಗಳಲ್ಲಿ ಎಲ್ಲಾ ಜಾತಿಯವರೂ ಇದ್ದಾರೆ. ಬ್ರಾಹ್ಮಣರು, ಅಂತ್ಯಜರು, ಪಂಡಿತರು, ಅನುಭಾವಿಗಳೂ ಇದ್ದಾರೆ. ಅವರ ನಡೆನುಡಿ ಎಲ್ಲವೂ ಅತೀಂದ್ರಿಯಕ್ಕೆ ಸಂಬಂಧಪಟ್ಟವು.

ಆಳ್ವಾರುಗಳಲ್ಲಿ ಮೇಲುಕೀಳೆಂಬ ತಾರತಮ್ಯವಿಲ್ಲ. ಅವರ ಚರಿತ್ರೆ ನಮಗೆ ಲಭ್ಯವಾಗಿರುವುದು ಅಲ್ಪವೇ. ಅವರು ಹಾಡಿಬಿಟ್ಟು ಹೋದ ಪಾಶುರಗಳ ಸೊಗಸು ಅಪಾರ, ಆಳ್ವಾರುಗಳನ್ನು ಕುರಿತು ಬರೆದಿರುವ ಗ್ರಂಥಗಳು ದಿವ್ಯಸೂರಿ ಚರಿತ, ಪ್ರಪನ್ನಾಮೃತ, ಗುರುಪರಂಪರಾಗ್ರಂಥ, ಆಚಾರ್ಯ ಸೂಕ್ತಿಮುಕ್ತಾವಳಿ, ಅಮುಕ್ತ ಮಾಲ್ಯದ, ಎಂಬುವು. ಗುರುಪರಂಪರಾ ಪ್ರಕಾರ ಆಳ್ವಾರುಗಳನ್ನು ಪೊಯ್‌ಗೈಯಾಳ್ವಾರ್, ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈಯಾಳ್ವಾರ್ ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ಆಂಡಾಳ್ ತೊಂಡರಡಿಪ್ಪೊಡಿಯಾಳ್ವಾರ್, ತಿರುಪ್ಪಾಣಾಳ್ವಾರ್, ತಿರುಮಂಗೈಯಾಳ್ವಾರ್, ನಮ್ಮಾಳ್ವಾರ್ ಮತ್ತು ಮಧುರಕವಿಯಾಳ್ವಾರ್ ಎಂಬುವರು. ಇವರನ್ನು ಶ್ರೀ ವೈಷ್ಣವರು ನಿತ್ಯವೂ ಪರಾಶರ ಭಟ್ಟರು ಹಾಡಿದ ಈ ಶ್ಲೋಕದಿಂದ ಸ್ಮರಿಸುತ್ತಾರೆ.

ಭೂತಂ ಸರಶ್ಚ ಮಹದಾಹ್ವಯ ಭಟ್ಟನಾಥ
ಶ್ರೀಭಕ್ತಿಸಾರ ಕುಲಶೇಖರ ಯೋಗಿ ವಾಹಾನ್
ಭಕ್ತಾಂಘ್ರಿರೇಣು, ಪರಕಾಲಯತೀಂದ್ರ
ಮಿಶ್ರಾನ್
ಶ್ರೀಮತ್ಪರಾಂಕುಶ ಮುನಿಂ ಪ್ರಣತೋಸ್ಮಿ
ನಿತ್ಯಂ

ಹನ್ನೆರಡು ಜನ ಆಳ್ವಾರುಗಳಲ್ಲಿ ಮೊದಲಿನ ಮೂವರು ಆಳ್ವಾರರ ಜೀವನ ಚರಿತ್ರೆಯನ್ನು ಒಟ್ಟಿಗೆ ಹೇಳುತ್ತಾರೆ ಕಾರಣ ಇವರು ಸಮಕಾಲೀನರು. ಮೊದಲಿನ ಪೊಯ್‌ಗೈಯಾಳ್ವಾರರು ಕಂಚಿನಗರದಲ್ಲಿ ಯಥೋಕ್ತಕಾರಿ ಸನ್ನಿಧಿಗೆ ಸೇರಿದ ಸರೋವರ ಸಮೀಪದಲ್ಲಿ ಸಿದ್ಧಾರ್ಥಿ ಸಂವತ್ಸರ ತುಲಾಮಾಸ ಶ್ರವಣ ನಕ್ಷತ್ರದಲ್ಲಿ ಪುಷ್ಪಗಳ ಮಧ್ಯೆ ಶ್ರೀ ಪಾಂಚಜನ್ಯ ಅಂಶರಾಗಿ ಅವತರಿಸಿದರು. ಎರಡನೆಯವರಾದ ಪೂದತ್ತಾಳ್ವಾರರು ಚೆಂಗಲ್ಪಟ್ಟು ಜಿಲ್ಲೆಯ ತಿರುಕ್ಕಡಲ್‌ಮಲ್ಲೈ ಎನ್ನುವ ದಿವ್ಯಕ್ಷೇತ್ರದಲ್ಲಿ ತುಲಾಮಾಸದಲ್ಲಿ ಧನಿಷ್ಠಾ ನಕ್ಷತ್ರದಲ್ಲಿ ಶ್ರೀ ಕೌಮೋದಕೀ ಅಂಶರಾಗಿ ಜನಿಸಿದರು ಮೂರನೆಯವರಾದ ಪೇಯಾಳ್ವಾರ್ ಮಯಿಲಾಪುರದಲ್ಲಿ ಆದಿಕೇಶವರಿಗೆ ಸೇರಿದ ಸರಸ್ಸಿನಲ್ಲಿ ತುಲಾಮಾಸದ ಶತಭಿಷಾ ನಕ್ಷತ್ರದಲ್ಲಿ ಶ್ರೀ ನಂದಕಾಂಶರಾಗಿ ಅವತರಿಸಿದರು. ಈ ಮೂವರೂ ಪುಷ್ಪಜಾತರಾಗಿ, ಭಕ್ತಿಜ್ಞಾನವೈರಾಗ್ಯಸಂಪನ್ನರಾಗಿ ಸರ್ವೇಶ್ವರನ ನಿರ್ಹೇತುಕ ಕಟಾಕ್ಷದಿಂದ ಶುದ್ಧ ಸತ್ವಗುಣಯುಕ್ತರಾಗಿ ಭಗವಂತನ ಚಿಂತನೆಯಲ್ಲಿ ಸದಾನಿರತರಾಗಿ ದಿವ್ಯಕ್ಷೇತ್ರಗಳನ್ನು ಸಂದರ್ಶಿಸುತ್ತಾ ಸಾಂಸಾರಿಕ ಸುಖಸಹವಾಸವನ್ನು ಮರೆತು ಗ್ರಾಮೈಕರಾತ್ರರಾಗಿ ಸುತ್ತುವ ಹವ್ಯಾಸವುಳ್ಳವರಾಗಿದ್ದರು. ಒಮ್ಮೆ ಭಗವತ್ಸಂಕಲ್ಪದಿಂದ ಅವರು ಮೂವರೂ ತಿರುಕ್ಕೋವಲೂರೆಂಬ ಊರಿಗೆ ಬಂದರು. ಆದಿನ ಕಾಳರಾತ್ರಿ, ಧೋ ಎಂದು ಮಳೆ ಸುರಿಯುತ್ತಿದೆ, ಬಿರುಗಾಳಿ. ಆ ದೊಡ್ಡ ಮಳೆಹೊಡೆತ ತಪ್ಪಿಸಿಕೊಳ್ಳಲು ಕತ್ತಲಿನಲ್ಲಿ ಆಶ್ರಯ ಪಡೆಯಲು ಈ ಮೂರು ಜನವೂ ಪ್ರತ್ಯೇಕವಾಗಿ ಪ್ರಯತ್ನದಲ್ಲಿ ನಿರತರಾಗಿದ್ದಾರೆ. ಮಳೆ ಬಿರುಗಾಳಿ ಕಾಳರಾತ್ರಿ ಇವುಗಳ ಅವಾಂತರದಿಂದ ಜನರೆಲ್ಲರೂ ತಮ್ಮ ತಮ್ಮ ಮನೆಬಾಗಿಲುಗಳನ್ನು ಮುಚ್ಚಿಕೊಂಡು ಬೆಚ್ಚಗೆ ಹೊದ್ದು ನಿದ್ರಿಸುತ್ತಿದ್ದಾರೆ.

ಮೊದಲು ಪೊಯ್‌ಗೈಯಾಳ್ವಾರರು ಒಂದು

ಶ್ರೀ ಕಂದಾಡೈ ಕೇಶವನ್

ಜಗಲಿಯ ಮೇಲೆ ಬಂದು ಸೇರಿ ಅಲ್ಲಿ ವಿಶ್ರಾಂತಿಗಾಗಿ ಮಲಗಿದರು. ಮಲಗಿಯೂ ಭಗವಂತನ ಚಿಂತನೆಯಲ್ಲಿ ಲೀನರಾಗಿದ್ದರು. ಸ್ವಲ್ಪ ಸಮಯದ ನಂತರ ಎರಡನೆಯ ಆಳ್ವಾರರು ಅಲ್ಲಿಗೆ ಬಂದು ಕತ್ತಲಿನಲ್ಲಿ ತಡಕಾಡಿ 'ಸ್ವಾಮಿ ಜಗಲಿಯ ಮೇಲೆ ಯಾರಿದ್ದೀರಿ, ನನಗೆ ಸ್ವಲ್ಪ ಸ್ಥಳವಿದೆಯೇ' ಎಂದು ಕೇಳಿದರು. ಅವರ ಧ್ವನಿಯನ್ನು ಕೇಳಿ ಪೊಯ್‌ಗೈ "ಒಬ್ಬನಿಗೆ ಮಲಗಲು ಇಬ್ಬರು ಕುಳಿತುಕೊಳ್ಳಲು ಸ್ಥಳವುಂಟು, ಬನ್ನಿ, ಇಬ್ಬರೂ ಕುಳಿತೇ ಕಾಲ ತಳ್ಳುವ" ಎಂದರು. ಇಬ್ಬರೂ ಸ್ವಲ್ಪ ಹೊತ್ತು ಕುಳಿತಿದ್ದರು. ಮಳೆಯಲ್ಲಿ ನೆನೆಯುತ್ತಾ ಪೇಯಾಳ್ವಾರರು ಅಲ್ಲಿಗೆ ಬಂದರು ತೊಯ್ದ ವಸ್ತ್ರಗಳಲ್ಲಿ ಗಡಗಡನೆ ನಡುಗುತ್ತ 'ಸ್ವಾಮಿ ಜಗಲಿಯಲ್ಲಿ ನನಗೂ ಸ್ವಲ್ಪ ಜಾಗ ಕೊಡಬಲ್ಲಿರಾ' ಎಂದು ಪ್ರಾರ್ಥಿಸಿಕೊಂಡರು. ಕೂಡಲೇ ಕುಳಿತಿದ್ದವರಿಬ್ಬರೂ 'ಅಗತ್ಯವಾಗಿ. ಇಲ್ಲಿ ಕೂಡಲು ಇಬ್ಬರಿಗೆ ಸ್ಥಳವಿದೆ. ಆದರೆ ಮೂವರೂ ನಿಲ್ಲಬಹುದು, ಮೇಲೆ ಬನ್ನಿ' ಎಂದರು. ಆ ಕಾರ್ಗತ್ತಲಿನಲ್ಲಿ ಮೂವರೂ ಒಟ್ಟಾಗಿ ಒಂದೇ ಜಗಲಿಯಲ್ಲಿ ನಿಂತು ಪರಸ್ಪರ ಪರಿಚಯ ಕುಶಲ ಪ್ರಶ್ನೆಗಳಲ್ಲಿ ನಿರತರಾದರು. ಕತ್ತಲಿನಲ್ಲಿ ಒಬ್ಬರ ಮುಖ ಇನ್ನೊಬ್ಬರಿಗೆ ಕಾಣಿಸದು, ಎಲ್ಲೆಲ್ಲೂ ಅಂಧಕಾರ. ಕೇವಲ ಮಾತೇ ಸಾಕ್ಷಿ, ಮಾತಿನ ಮರ್ಮದಿಂದ ಮೊದಲಿನ ಪರಿಚಯ ಮೊದಲಾಯಿತು. 'ಸ್ವಾಮಿ ತಾವು ಯಾರು' ಎಂದು ಒಬ್ಬರು ಕೇಳಲು 'ನಾನು ಭಗವಂತನಿಗೆ ಶೇಷಭೂತನಾದವನು' ಎಂಬುದಾಗಿ ಒಬ್ಬರು ಉತ್ತರಿಸಿದರೆ, ಮತ್ತೊಬ್ಬರು 'ನಾನು ವಾಸುದೇವನ ದಾಸ' ಎಂದರು. ಮೂರನೆಯವರು 'ನಾನು ಕೋಸಲೇಂದ್ರನ ದಾಸ' ಎಂದರು. ಹೀಗೆ ಆಕಸ್ಮಿಕವಾಗಿ ಸಂದರ್ಶಿಸಿ ಕತ್ತಲೆಯಲ್ಲಿ ಒಬ್ಬರ ಮುಖವನ್ನು ಒಬ್ಬರು ಕಾಣದೆ ಪರಸ್ಪರ ಕುಶಲಪ್ರಶ್ನೆಗಳಿಂದ ಬಂದ ಉತ್ತರಗಳಿಂದ ಹೃಷ್ಟರಾಗಿ ಅನ್ಯೋನ್ಯ ಪ್ರೇಮಭಾವದಿಂದ ಪುಲಕಿತರಾಗಿ ವಂದನ ಪ್ರತಿವಂದನಗಳನ್ನು ಸ್ವೀಕರಿಸುತ್ತ ತಮ್ಮ ತಮ್ಮ ಸ್ವರೂಪಗಳನ್ನು ತಿಳಿಯಪಡಿಸುತ್ತ ಭಗವದ್ಗುಣ ಅಮೃತಪಾನಮತ್ತರಾಗಿ ಸಂಭಾಷಣೆಯಲ್ಲಿ ನಿರತರಾಗಿರುವ ಸಮಯದಲ್ಲಿ, ತಮ್ಮ ಮೂವರ ಮಧ್ಯೆ ಇನ್ನು ಯಾರೋ ಅಪರಿಚಿತ ವ್ಯಕ್ತಿ ಸೇರಿಕೊಂಡು ಅದೃಶ್ಯರಾಗಿ ತಮ್ಮನ್ನು ಎಲ್ಲ ಕಡೆಯಿಂದ ಒತ್ತರಿಸುವಂತೆ ಭಾಸವಾಗಲು, ಆ ನಾಲ್ಕನೆಯ ವ್ಯಕ್ತಿ ಯಾರೆಂದು ಕೇಳಿ ಉತ್ತರ ಬಾರದಿರಲು ವಿಸ್ಮಿತರಾಗಿ, ಆ ನಾಲ್ಕನೆಯ ವ್ಯಕ್ತಿ ಸ್ವತಃ ಭಗವಂತನೇ ಎಂಬುದಾಗ ತಮ್ಮ ಯೋಗದೃಷ್ಟಿಯಿಂದ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ ಪ್ರಾ 7–30 ಪ್ರಾ 8–30 |
| | | ಸಮರ್ಪಣ ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | ಪ್ರಾ 9–30 ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6–30 ರಾ 7–00 | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | ರಾ 8–45 ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಅರಿತು ಆ ಪರಮಾತ್ಮನ ಸಾಮೀಪ್ಯ ಸ್ಪರ್ಶದ ಅನುಭವದಿಂದಾಗಿ ಭಕ್ತಿ ಪರವಶರಾಗಿ ಆನಂದ ದಿಂದ ತಮ್ಮ ಅನುಭವಕ್ಕೆ ಬಂದ ಆ ಪರಮಾತ್ಮನ ಅಪಾರಮಹಿಮಾವಿಶೇಷಗಳನ್ನು ಕೊಂಡಾಡುತ್ತಾ ಒಡನೆಯೇ ಅವರು ಒಬ್ಬೊಬ್ಬರೂ ಒಂದೊಂದು ನೂರು ಪದ್ಯಗಳಿಂದ ಅಗೋಚರನಾದ ಅನಂತನಾದ ಅಚ್ಯುತನನ್ನು ಕೊಂಡಾಡಿದರು ಆ ಸುಂದರ ಭಕ್ತಿಮಾಲೆ ತಿರುವಂದಾದಿ ಎನ್ನುವ ಹೆಸರಿನಿಂದ ಪ್ರಸಿದ್ಧವಾಗಿದೆ. ಪಾಶುರದ ಕೊನೆಯ ಪದವನ್ನೇ ಮುಂದಿನ ಪಾಶುರದ ಮೊದಲ ಪದವನ್ನಾಗಿ ಬಳಸಿ ಪಾಶುರವನ್ನು ಹೇಳುವುದ ಅಂದಾದಿ ಎನ್ನಿಸುತ್ತದೆ. ಭಗವಂತನಲ್ಲಿ ಅಚಲ ಪ್ರೇಮದಿಂದ ಭಕ್ತಿಪರವಶರಾಗಿ ಆತನ ಸ್ವರೂಪ ಗುಣ ವಿಭವಾದಿಗಳನ್ನು ಹಾಡಿದ ತಿರುವಂದಾದಿ ಭಕ್ತಿ ಭಂಡಾರಕ್ಕೆ ಮೂರು ಕಳಸಗಳು. ಈ ಜಗತ್ತಿನ ವಿರಾಟ್ ಸಾಮರ್ಥ್ಯದ ಎದುರು ಮನುಷ್ಯನ ಅರಿವು ಅಲ್ಪ, ಅಂತೆಯೇ ಈ ನಿಸರ್ಗದ ಸೊಬಗನ್ನು ಕಂಡು ಅವರು ಮೂಕರಾಗಿ ದೈನ್ಯರಾಗಿ ಹಾಡಿದ ತಿರುವಂದಾದಿ ಅಂದದ ಮುಡಿ ಚೆಂದದ ಕುಡಿಗಳು. ಪೊಯ್‌ಗೈ ಆಳ್ವಾರರು ಹಾಡಿದ ಮೊದಲ ಅಂದಾದಿಯ ಮೊದಲ ಪದ್ಯ.

ವೈಯಂ ತಹಳಿಯಾ ವಾರ್‌ಕಡಲೆ: ನೆಯ್ಯಾಹ
ವೆಯ್ಯ ಕದಿರೋನ್ ವಿಳಕ್ಕಾಗ ಶೆಯ್ಯ
ಶುಡರಾಳಿಯಾನ್ ಅಡಿಕ್ಕೇ ಶೂಟ್ಟಿನೇನ್
ಶೊಲ್‌ಮಾಲೈ

ಇಡರಾಳೀ ನೀಙ್ಗುಹವೇ ಎನ್ರು.

(ಧರಣಿಯೇ ಹಣತೆಯಾಗಿ, ವಾರ್‌ಕಡಲೇ ತುಪ್ಪವಾಗಿ, ಪ್ರಕಾಶಿಸುವ ಸೂರ್ಯನು ಬೆಳಕಾಗಿರಲು ಚಕ್ರಪಾಣಿಯ ಕೆಂದಾವರೆಗಳಿಗೆ ಈ ನುಡಿ ಮಾಲೆಯನ್ನು ಭವಸಾಗರ ಅಳಿಯಲಿ ಎಂದು ಮುಡಿಸುವೆನು )

ಇಲ್ಲಿ ಆಳ್ವಾರರು ಭೂಮಿಯನ್ನು ದೀಪದ ಸ್ಥಾಲಿಯನ್ನಾಗಿ, ಕಡಲನ್ನು ಅದಕ್ಕೆ ತುಪ್ಪವಾಗಿ ಪ್ರಜ್ವಲಿಸುವ ಸೂರ್ಯಪ್ರಕಾಶವನ್ನು ದೀಪದ ಬೆಳಕನ್ನಾಗಿ ನಿರೂಪಿಸಿ ಭಗವಂತನ ವೈಭವವನ್ನು ಕೊಂಡಾಡಿದ್ದಾರೆ. 'ವಿಶಾಲವಾದ ಭೂಮಂಡಲವನ್ನೂ ಅದನ್ನು ಆವರಿಸುವ ಕಡಲು ಸೂರ್ಯ ಚಂದ್ರರನ್ನೂ ಭಗವಂತನ ಸೃಷ್ಟಿ, ಎಂಬುದಾಗಿ ಸ್ಮರಿಸುತ್ತಾ ಆವನ ಅಪಾರಗುಣಗಳನ್ನು ನೀನು ನೆನೆ ಮನವೇ. ಹಾಗೆ ಮಾಡಿದರೆ ನೀನು ಭವಸಾಗರದಿಂದ ಮುಕ್ತನಾಗುವೆ'. ಭಕ್ತಿಯು ಮುಕ್ತಿಗೆ ಸೋಪಾನ. ಭವಸಾಗರಕ್ಕೆ ಭಗವಂತನ ಚಿಂತನೆಯೇ ನಾವೆ.

ಎರಡನೆಯವರು ಪೂದತ್ತಾಳ್ವಾರ್. ಅವರು

(33ನೇ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೪ ನೆಯ ಅಧ್ಯಾಯ

ಶ್ರೀ ಭಗವಾನುವಾಚ —

ಇಮಂ ವಿವಸ್ವತೇ ಯೋಗಂ
ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ
ಮನುರಿಕ್ಷ್ವಾಕವೇಽಬ್ರವೀತ್ ॥ 1

ಶ್ರೀಕೃಷ್ಣ: ಸನಾತನವಾದ ಈ ಯೋಗವನ್ನು ನಾನು ಮೊದಲು ಸೂರ್ಯನಿಗೆ ಹೇಳಿದೆನು; ಸೂರ್ಯ ಮನುವಿಗೆ ಹೇಳಿದನು; ಮನು ಇಕ್ಷ್ವಾಕುವಿಗೆ ಹೇಳಿದನು.

ಏವಂ ಪರಂಪರಾಪ್ರಾಪ್ತಮ್
ಇಮಂ ರಾಜರ್ಷಯೋ ವಿದುಃ ।
ಸ ಕಾಲೇನೇಹ ಮಹತಾ
ಯೋಗೋ ನಷ್ಟಃ ಪರಂತಪ ॥ 2

ಅರ್ಜುನ, ಹೀಗೆ ಒಬ್ಬರಿಂದೊಬ್ಬರಿಗೆ ಬಂದ ಇದನ್ನು ರಾಜರ್ಷಿಗಳು ತಿಳಿದುಕೊಂಡರು ಅಲ್ಲಿಂದ ಬಹಳ ಕಾಲ ಸಂದು. ಈ ಯೋಗ ಪರಂಪರೆ ಕಾಲ ಗರ್ಭದಲ್ಲಿ ಮರೆಯಾಯಿತು.

ಸ ಏವಾಯಂ ಮಯಾ ತೇಽದ್ಯ
ಯೋಗಃ ಪ್ರೋಕ್ತಃ ಪುರಾತನಃ ।
ಭಕ್ತೋಽಸಿ ಮೇ ಸಖಾ ಚೇತಿ
ರಹಸ್ಯಂ ಹ್ಯೇತದುತ್ತಮಮ್ ॥ 3

ಬಹು ಹಿಂದಿನಿಂದ ಬಂದ ಆ ಯೋಗವನ್ನೇ ನೀನು ಭಕ್ತನೂ ಗೆಳೆಯನೂ ಆಗಿರುವುದರಿಂದ ನಿನಗೆ ಈಗ ಹೇಳಿದೆನು. ಇದು ಬಹು ರಹಸ್ಯವಾದ ವಿದ್ಯೆ.

ಅರ್ಜುನ ಉವಾಚ—

ಅಪರಂ ಭವತೋ ಜನ್ಮ
ಪರಂ ಜನ್ಮ ವಿವಸ್ವತಃ ।
ಕಥಮೇತದ್ವಿಜಾನೀಯಾಂ
ತ್ವಮಾದೌ ಪ್ರೋಕ್ತವಾನಿತಿ ॥ 4

ಅರ್ಜುನ: ನೀನು ಇತ್ತೀಚೆಗೆ ಜನಿಸಿದವನು, ಸೂರ್ಯನು ತುಂಬ ಪುರಾತನನದವನು. ಹೀಗಿರುವಾಗ ನೀನು ಇದನ್ನು ಮೊದಲು ಹೇಳಿದವನೆಂದು ನಾನು ಹೇಗೆ ತಿಳಿಯಲಿ?

ಶ್ರೀ ಭಗವಾನುವಾಚ —

ಬಹೂನಿ ಮೇ ವ್ಯತೀತಾನಿ
ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ
ನ ತ್ವಂ ವೇತ್ಥ ಪರಂತಪ ॥ 5

ಶ್ರೀಕೃಷ್ಣ: ಅರ್ಜುನ, ನಿನಗೂ ನನಗೂ ಅನೇಕ ಜನ್ಮಗಳು ಆಗಿಹೋದವು. ನಾನು ಆ ಎಲ್ಲವನ್ನೂ ಬಲ್ಲೆನು; ನಿನಗೆ ಮಾತ್ರ ತಿಳಿದಿಲ್ಲ.

ಅಜೋಽಪಿ ಸನ್ನವ್ಯಯಾತ್ಮಾ
ಭೂತಾನಾಮೀಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ
ಸಂಭವಾಮ್ಯಾತ್ಮಮಾಯಯಾ ॥ 6

ನನಗೆ ಹುಟ್ಟಿಲ್ಲ, ನನ್ನ ದೇಹಕ್ಕೆ ಅಳಿವಿಲ್ಲ. ನಾನು ಎಲ್ಲ ಪ್ರಾಣಿಗಳ ಒಡೆಯ. ನನ್ನ ಮಾಯಾಶಕ್ತಿಯನ್ನು ಮುಂದಿಟ್ಟುಕೊಂಡು ಸ್ವೇಚ್ಛೆಯಿಂದ ನಾನು ಹುಟ್ಟುತ್ತೇನೆ.

ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ
ತದಾಽತ್ಮಾನಂ ಸೃಜಾಮ್ಯಹಮ್ ॥ 7

ಅರ್ಜುನ, ಯಾವ ಕಾಲದಲ್ಲಿ ಧರ್ಮದ ಇಳುಗಡೆಯೂ ಅಧರ್ಮದ ಏರಿಕೆಯೂ ಆಗುತ್ತದೋ ಆಗೆಲ್ಲ ನಾನು ಅವತರಿಸಿ ಬರುತ್ತೇನೆ.



ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ ॥ 8

ಒಳ್ಳೆಯವರ ಉದ್ಧಾರಕ್ಕಾಗಿ ಕೆಟ್ಟವರ ನಿರ್ನಾಮಕ್ಕಾಗಿ ಮತ್ತು ಧರ್ಮವನ್ನು ನೆಲೆಗೊಳಿಸುವುದಕ್ಕಾಗಿ ಪ್ರತಿಯೊಂದು ಯುಗದಲ್ಲಿಯೂ ನಾನು ಹುಟ್ಟಿ ಬರುತ್ತೇನೆ.

ಜನ್ಮ ಕರ್ಮ ಚ ಮೇ ದಿವ್ಯಮ್
ಏವಂ ಯೋ ವೇತ್ತಿ ತತ್ತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ
ನೈತಿ ಮಾಮೇತಿ ಸೋಽರ್ಜುನ ॥ 9

ದಿವ್ಯವಾದ ನನ್ನ ಹುಟ್ಟನ್ನೂ ಕರ್ಮವನ್ನೂ ಹೀಗೆ ಯಥಾವತ್ತಾಗಿ ತಿಳಿದವನು ದೇಹವನ್ನು ಬಿಟ್ಟಮೇಲೆ ಮತ್ತೆ ಹುಟ್ಟನ್ನು ಹೊಂದುವುದಿಲ್ಲ. ಅವನು ನನ್ನನ್ನು ಪಡೆಯುತ್ತಾನೆ.

ವೀತರಾಗಭಯಕ್ರೋಧಾ
ಮನ್ಮಯಾ ಮಾಮುಪಾಶ್ರಿತಾಃ ।
ಬಹವೋ ಜ್ಞಾನತಪಸಾ
ಪೂತಾ ಮದ್ಭಾವಮಾಗತಾಃ ॥ 10

ಪ್ರೀತಿ, ಹೆದರಿಕೆ, ಸಿಟ್ಟು – ಇವುಗಳಿಲ್ಲದವರಾಗಿ ನನ್ನಲ್ಲಿಯೇ ಮನಸ್ಸಿಟ್ಟು ನನಗೆ ಶರಣು ಬಂದ ಅನೇಕರು ಜ್ಞಾನವೆಂಬ ತಪಸ್ಸಿನಿಂದ ಶುದ್ಧರಾಗಿ ನನ್ನನ್ನು ಪಡೆದಿರುತ್ತಾರೆ.

ಯೇ ಯಥಾ ಮಾಂ ಪ್ರಪದ್ಯಂತೇ
ತಾಂಸ್ತಥೈವ ಭಜಾಮ್ಯಹಮ್ ।
ಮಮ ವರ್ತ್ಮಾನುವರ್ತಂತೇ
ಮನುಷ್ಯಾಃ ಪಾರ್ಥ ಸರ್ವಶಃ ॥ 11

ಅರ್ಜುನ, ನನ್ನನ್ನು ಯಾರು ಹೇಗೆ ಶರಣೆಂದರೆ ನಾನು ಅವರಿಗೆ ಹಾಗೆಯೇ ಅನುಗ್ರಹಿಸುತ್ತೇನೆ. ಮನುಷ್ಯರು ಎಲ್ಲಿ ಯಾವ ದಾರಿಯಲ್ಲಿ ಹೋದರೂ ಕೊನೆಗೆ ಬಂದು ಸೇರುವುದು ನನ್ನನ್ನೇ.

ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ
ಯಜಂತ ಇಹ ದೇವತಾಃ ।
ಕ್ಷಿಪ್ರಂ ಹಿ ಮಾನುಷೇ ಲೋಕೇ
ಸಿದ್ಧಿರ್ಭವತಿ ಕರ್ಮಜಾ ॥ 12

ಕರ್ಮಗಳಿಗೆ ಫಲವನ್ನು ಬಯಸುವವರು ದೇವತೆಗಳನ್ನು ಆರಾಧಿಸುತ್ತಾರೆ. ಏಕೆಂದರೆ ಮನುಷ್ಯಲೋಕದಲ್ಲಿ ಕರ್ಮದಿಂದ ಸಿದ್ಧಿ ಬಹುಬೇಗ ಆಗುತ್ತದೆ.

ಚಾತುರ್ವರ್ಣ್ಯಂ ಮಯಾ
ಸೃಷ್ಟಂ ಗುಣಕರ್ಮವಿಭಾಗಶಃ ।
ತಸ್ಯ ಕರ್ತಾರಮಪಿ ಮಾಂ
ವಿದ್ಧ್ಯಕರ್ತಾರಮವ್ಯಯಮ್ ॥ 13

## ಜ್ಞಾನಿಯು ಮಾಡಿದರೂ ಮಾಡಿದ ಹಾಗಲ್ಲ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ:

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಗುಣಕ್ಕೂ ಕರ್ಮಕ್ಕೂ ತಕ್ಕಂತೆ ನಾಲ್ಕು ವರ್ಣಗಳನ್ನು ನಾನು ಹುಟ್ಟಿಸಿದ್ದೇನೆ. ಅದನ್ನು ಮಾಡಿದವನಾದರೂ ನಾನು ಕರ್ತಾರನಲ್ಲ. ಏಕೆಂದರೆ ನನಗೆ ಕರ್ತೃತ್ವದ ಲೋಪವಿಲ್ಲ.

ನ ಮಾಂ ಕರ್ಮಾಣಿ ಲಿಂಪಂತಿ
ನ ಮೇ ಕರ್ಮಫಲೇ ಸ್ಪೃಹಾ ।
ಇತಿ ಮಾಂ ಯೋಽಭಿಜಾನಾತಿ
ಕರ್ಮಭಿರ್ನ ಸ ಬಧ್ಯತೇ ॥ 14

ನನ್ನನ್ನು ಕರ್ಮಗಳು ಸೋಂಕುವುದಿಲ್ಲ ; ನನಗೆ ಕರ್ಮದ ಫಲದಾಸೆ ಇಲ್ಲ ; ನನ್ನನ್ನು ಹೀಗೆ ಯಾವನು ತಿಳಿಯುತ್ತಾನೋ ಅವನು ಕರ್ಮದ ಕಟ್ಟಿಗೆ ಒಳಗಾಗುವುದಿಲ್ಲ.

ಏವಂ ಜ್ಞಾತ್ವಾ ಕೃತಂ ಕರ್ಮ
ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವ ತಸ್ಮಾತ್ತ್ವಂ
ಪೂರ್ವೈಃ ಪೂರ್ವತರಂ ಕೃತಮ್ ॥ 15

ಮೋಕ್ಷವನ್ನು ಬಯಸಿದ ಹಿಂದಿನವರು ಕೂಡ ಹೀಗೆ ತಿಳಿದು ಕರ್ಮವನ್ನು ಮಾಡಿದರು. ಆದ್ದರಿಂದ ಹಿಂದಿನವರು ಕೂಡ ಮಾಡಿದ ಪುರಾತನದ ಕರ್ಮಮಾರ್ಗವನ್ನೇ ನೀನೂ ಹಿಡಿ.

ಕಿಂ ಕರ್ಮ ಕಿಮಕರ್ಮೇತಿ
ಕವಯೋಽಪ್ಯತ್ರ ಮೋಹಿತಾಃ ।
ತತ್ತೇ ಕರ್ಮ ಪ್ರವಕ್ಷ್ಯಾಮಿ
ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥

ಕರ್ಮ ಎಂದರೇನು, ಕರ್ಮ ಇಲ್ಲದಿರುವ ಸ್ಥಿತಿ ಎಂದರೇನು ಎಂಬ ವಿಷಯದಲ್ಲಿ ಪಂಡಿತರು ಕೂಡಾ ತಪ್ಪಾಗಿ ತಿಳಿಯುತ್ತಿರುವುದುಂಟು. ಯಾವುದನ್ನು ತಿಳಿದರೆ ನಿನಗೆ ಪಾಪದಿಂದ ಬಿಡುಗಡೆಯಾಗುವುದೋ ಆ ಕರ್ಮದ ವಿಷಯವನ್ನು ನಾನು ನಿನಗೆ ಹೇಳುತ್ತೇನೆ.

ಕರ್ಮಣೋ ಹ್ಯಪಿ ಬೋದ್ಧವ್ಯಂ
ಬೋದ್ಧವ್ಯಂ ಚ ವಿಕರ್ಮಣಃ ।
ಅಕರ್ಮಣಶ್ಚ ಬೋದ್ಧವ್ಯಂ
ಗಹನಾ ಕರ್ಮಣೋ ಗತಿಃ ॥ 17

ಮಾಡುವ ಕರ್ಮದ ಬಗ್ಗೆಯೂ ತಿಳಿಯಬೇಕು. ಮಾಡಬಾರದ ಕರ್ಮದ ಬಗ್ಗೆಯೂ ತಿಳಿಯಬೇಕು. ಏನೂ ಮಾಡದಿರುವ ಅಕರ್ಮದ ಸ್ಥಿತಿಯ ಬಗ್ಗೆಯೂ ತಿಳಿಯಬೇಕು. ಕರ್ಮದ ಅರಿವು ಕಷ್ಟದ ಕೆಲಸ.

ಕರ್ಮಣ್ಯಕರ್ಮ ಯಃ ಪಶ್ಯೇತ್
ಅಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ಮನುಷ್ಯೇಷು
ಸ ಯುಕ್ತಃ ಕೃತ್ಸ್ನಕರ್ಮಕೃತ್ ॥ 18

ಕರ್ಮ ನಡೆಯುತ್ತಿರುವಾಗಲೂ ಆದರ ಕರ್ತೃ ತಾನಲ್ಲ ಎನ್ನುವ ಅಕರ್ಮಭಾವದಿಂದ ಮತ್ತು ತಾನು ನಿಷ್ಕ್ರಿಯನಾಗಿದ್ದಾಗಲೂ ವಿಶ್ವದ ಎಲ್ಲ ಕರ್ಮವೂ ಭಗವಂತನಿಂದ ನಡೆದಿದೆ ಎಂಬ ಭಾವದಿಂದ ನೋಡುವವನು ಮನುಷ್ಯರಲ್ಲೆಲ್ಲ ಜಾಣನು. ಅವನು ನಿಜವಾದ ಯೋಗಿ. ಅವನು ಎಲ್ಲ ಕರ್ಮಗಳನ್ನೂ ಮಾಡಿದಂತೆಯೇ.

ಯಸ್ಯ ಸರ್ವೇ ಸಮಾರಂಭಾಃ
ಕಾಮಸಂಕಲ್ಪವರ್ಜಿತಾಃ ।
ಜ್ಞಾನಾಗ್ನಿದಗ್ಧಕರ್ಮಾಣಂ
ತಮಾಹುಃ ಪಂಡಿತಂ ಬುಧಾಃ ॥ 19

ಫಲದಾಸೆಯನ್ನೂ ಅಭಿಮಾನವನ್ನೂ ತೊರೆದು ಕರ್ಮ ಮಾಡುವವನು ತಿಳಿವಿನ ಬೆಂಕಿಯಿಂದ ಕರ್ಮಗಳನ್ನು ಸುಟ್ಟುಕೊಂಡವನು. ತಿಳಿದವರು ಅವನನ್ನು ಆತ್ಮಜ್ಞಾನಿಯೆನ್ನುವರು.

ತ್ಯಕ್ತ್ವಾ ಕರ್ಮಫಲಾಸಂಗಂ
ನಿತ್ಯತೃಪ್ತೋ ನಿರಾಶ್ರಯಃ ।
ಕರ್ಮಣ್ಯಭಿಪ್ರವೃತ್ತೋಽಪಿ
ನೈವ ಕಿಂಚಿತ್ಕರೋತಿ ಸಃ ॥ 20

ಫಲದಾಸೆಯನ್ನು ತೊರೆದು, ತೃಪ್ತನಾಗಿ, ಯಾವ ಹಂಗೂ ಇಲ್ಲದೆ, ಕರ್ಮಗಳನ್ನು ಮಾಡಿದರೂ ಅವನು ಕರ್ಮದ ಬಂಧದಿಂದ ದೂರವಾಗಿರುತ್ತಾನೆ.

ನಿರಾಶೀರ್ಯತಚಿತ್ತಾತ್ಮಾ
ತ್ಯಕ್ತಸರ್ವಪರಿಗ್ರಹಃ ।
ಶಾರೀರಂ ಕೇವಲಂ ಕರ್ಮ
ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ 21

ಬಯಕೆ ಇಲ್ಲದೆ, ಮನಸ್ಸನ್ನೂ ದೇಹವನ್ನೂ ಹಿಡಿತದಲ್ಲಿಟ್ಟುಕೊಂಡು, ಎಲ್ಲವನ್ನೂ ತೊರೆದು ಬರಿ ಬದುಕಿರುವಷ್ಟು ಮಟ್ಟಿಗೆ ಕರ್ಮವನ್ನು ಮಾಡುವವನಿಗೆ ಪಾಪವಿಲ್ಲ.

ಯದೃಚ್ಛಾಲಾಭಸಂತುಷ್ಟೋ
ದ್ವಂದ್ವಾತೀತೋ ವಿಮತ್ಸರಃ ।
ಸಮಃ ಸಿದ್ಧಾವಸಿದ್ಧೌ ಚ
ಕೃತ್ವಾಪಿ ನ ನಿಬಧ್ಯತೇ ॥ 22

ತಾನಾಗಿ ದೊರೆತದ್ದರಲ್ಲಿ ತೃಪ್ತನಾಗಿ, ಸುಖ-ದುಃಖ ಮೊದಲಾದ ದ್ವಂದ್ವಗಳನ್ನು ದಾಟಿದವನಾಗಿ, ಮತ್ತೊಬ್ಬರ ಏಳಿಗೆಗೆ ಅಸೂಯೆ ಪಡದೆ, ಕಾರ್ಯ ಫಲಿಸಿದರೂ ಫಲಿಸದಿದ್ದರೂ ಒಂದೇ ರೀತಿಯಲ್ಲಿರುವವನು ಕರ್ಮ ಮಾಡಿದರೂ ಅದರ ಕಟ್ಟಿಗೊಳಪಡುವುದಿಲ್ಲ.

ಗತಸಂಗಸ್ಯ ಮುಕ್ತಸ್ಯ
ಜ್ಞಾನಾವಸ್ಥಿತಚೇತಸಃ ।
ಯಜ್ಞಾಯಾಚರತಃ ಕರ್ಮ
ಸಮಗ್ರಂ ಪ್ರವಿಲೀಯತೇ ॥ 23

ಅಭಿಮಾನವನ್ನು ತೊರೆದು ಕರ್ಮಗಳ ಕಟ್ಟನ್ನು ಕಳಚಿಕೊಂಡು ಜ್ಞಾನದಲ್ಲಿ ಮನಸ್ಸನ್ನು ನೆಲೆಗೊಳಿಸಿ ಈಶ್ವರನಿಗೆ ಪ್ರೀತಿಯಾಗಲೆಂದು ಮಾಡುವ ಕರ್ಮವೆಲ್ಲವೂ ಲಯವಾಗುತ್ತವೆ.

ಬ್ರಹ್ಮಾರ್ಪಣಂ ಬ್ರಹ್ಮ ಹವಿಃ
ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
ಬ್ರಹ್ಮೈವ ತೇನ ಗಂತವ್ಯಂ
ಬ್ರಹ್ಮಕರ್ಮಸಮಾಧಿನಾ ॥ 24

ಹೋಮವೂ ಬ್ರಹ್ಮಮಯ; ಹವಿಸ್ಸೂ ಬ್ರಹ್ಮಮಯ; ಅಗ್ನಿಯೂ ಬ್ರಹ್ಮಮಯ; ಹೋಮಿಸುವವನೂ ಬ್ರಹ್ಮಮಯ. ಹೀಗೆ ತಾನು ಮಾಡುವ ಕ್ರಿಯೆಯಲ್ಲೆಲ್ಲ ಸರ್ವಗತವಾದ ಬ್ರಹ್ಮತತ್ತ್ವವನ್ನೇ ಹೋಗಿ ಸೇರುತ್ತಾನೆ.

ದೈವಮೇವಾಪರೇ ಯಜ್ಞಂ
ಯೋಗಿನಃ ಪರ್ಯುಪಾಸತೇ ।
ಬ್ರಹ್ಮಾಗ್ನಾವಪರೇ ಯಜ್ಞಂ
ಯಜ್ಞೇನೈವೋಪಜುಹ್ವತಿ ॥ 25

ಕೆಲವು ಯೋಗಿಗಳು ಭಗವಂತನ ಉಪಾಸನೆಯನ್ನೆ ಯಜ್ಞವೆಂದು ಆಚರಿಸುತ್ತಾರೆ. ಇನ್ನು ಕೆಲವರು ಬ್ರಹ್ಮವೆಂಬ ಅಗ್ನಿಯಲ್ಲಿ ಭಗವತ್ ಪೂಜಾ ರೂಪವಾಗಿ ಯಜ್ಞ ಯಾಗಾದಿಗಳಿಂದ ಹೋಮಿಸುವರು.

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ
ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ವಿಷಯಾನನ್ಯೇ
ಇಂದ್ರಿಯಾಗ್ನಿಷು ಜುಹ್ವತಿ ॥ 26

ಇನ್ನು ಕೆಲವರು ನಿಗ್ರಹವೆಂಬ ಬೆಂಕಿಯಲ್ಲಿ ಶ್ರೋತ್ರ ಮೊದಲಾದ ಇಂದ್ರಿಯಗಳನ್ನು ಹೋಮ ಮಾಡುತ್ತಾರೆ. ಮತ್ತೆ ಕೆಲವರು ಇಂದ್ರಿ

ಯಗಳೆಂಬ ಬೆಂಕಿಯಲ್ಲಿ ಶಬ್ದ ಮೊದಲಾದ ವಿಷಯಗಳನ್ನು ಭಗವತ್‌ಪೂಜೆಯೆಂದೇ ಹೋಮ ಮಾಡುತ್ತಾರೆ.

ಸರ್ವಾಣೀಂದ್ರಿಯಕರ್ಮಾಣಿ
ಪ್ರಾಣಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ
ಜುಹ್ವತಿ ಜ್ಞಾನದೀಪಿತೇ ॥ 27

ಇನ್ನು ಕೆಲವರು ಎಲ್ಲ ಇಂದ್ರಿಯಗಳ ವಿಷಯಗಳನ್ನೂ ಪ್ರಾಣಗಳ ವಿಷಯಗಳನ್ನೂ ಆತ್ಮಸಂಯಮವೆಂಬ ಬೆಂಕಿಯಲ್ಲಿ ಹೋಮ ಮಾಡುತ್ತಾರೆ.

ದ್ರವ್ಯಯಜ್ಞಾಸ್ತಪೋಯಜ್ಞಾ
ಯೋಗಯಜ್ಞಾಸ್ತಥಾಽಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ
ಯತಯಃ ಸಂಶಿತವ್ರತಾಃ ॥ 28

ಕಠಿನ ವ್ರತನಿಷ್ಠರಾದ ಕೆಲವು ಸಾಧಕರು ಭಗವತ್ ಪೂಜಾರೂಪವಾಗಿ ಹಣವನ್ನು ವೆಚ್ಚ ಮಾಡುವರು; ಉಪವಾಸ ಮೊದಲಾದದ್ದನ್ನು ನಡೆಸುವರು; ಹಾಗೆಯೇ ಇನ್ನು ಕೆಲವರು ಯೋಗಾಭ್ಯಾಸ ನಡೆಸುವರು; ವೇದಾಭ್ಯಾಸವನ್ನು ಮಾಡುವರು ಮತ್ತು ಶಾಸ್ತ್ರಾರ್ಥವನ್ನು ತಿಳಿದುಕೊಳ್ಳುವರು.

ಅಪಾನೇ ಜುಹ್ವತಿ ಪ್ರಾಣಂ
ಪ್ರಾಣೇಽಪಾನಂ ತಥಾಽಪರೇ ।
ಪ್ರಾಣಾಪಾನಗತೀ ರುದ್ಧ್ವಾ
ಪ್ರಾಣಾಯಾಮಪರಾಯಣಾಃ ॥ 29

ಪ್ರಾಣಾಯಾಮದಲ್ಲಿ ಪಣಿತರಾದ ಇನ್ನು ಕೆಲವರು ಪ್ರಾಣದಲ್ಲಿ ಅಪಾನವನ್ನು ಅಪಾನದಲ್ಲಿ ಪ್ರಾಣವನ್ನು ಹೋಮಿಸಿ ಪ್ರಾಣಾಪಾನಗಳ ಚಲನವನ್ನು ನಿಯಂತ್ರಿಸಿ ಕುಂಭಕದಲ್ಲೇ ನೆಲೆಗೊಳ್ಳುತ್ತಾರೆ.

ಅಪರೇ ನಿಯತಾಹಾರಾಃ
ಪ್ರಾಣಾನ್ ಪ್ರಾಣೇಷು ಜುಹ್ವತಿ ।
ಸರ್ವೇಽಪ್ಯೇತೇ ಯಜ್ಞವಿದೋ
ಯಜ್ಞಕ್ಷಪಿತಕಲ್ಮಷಾಃ ॥ 30

ಮತ್ತೆ ಕೆಲವರು ಮಿತಾಹಾರದ ಮೂಲಕ ಪ್ರಾಣವನ್ನು ಶೋಷಿಸಿ ಪ್ರಾಣಗಳಲ್ಲಿ ಪ್ರಾಣಗಳನ್ನು ಹೋಮಿಸುತ್ತಾರೆ. ಇವರೆಲ್ಲರೂ ಯಜ್ಞಗಳನ್ನು ತಿಳಿದವರು ಮತ್ತು ಯಜ್ಞದಿಂದ ತಮ್ಮ ಪಾಪಗಳನ್ನು ಕಳೆದುಕೊಂಡವರು.

ಯಜ್ಞಶಿಷ್ಟಾಮೃತಭುಜೋ
ಯಾಂತಿ ಬ್ರಹ್ಮ ಸನಾತನಮ್ ।

(32 ನೇ ಪುಟ ನೋಡಿ)

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ಇತರ ತಿರುಪತಿಯ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (2 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)
ಬಸ್ ಹೊರಡುವ ಕಾಲ : ಬೆಳಗ್ಗೆ 6-30, ಬೆಳಗ್ಗೆ 10-30, ಸಂಜೆ 4-30
ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 1॥ ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇ.**

( ಮುಂದುವರಿದದ್ದು )

ಶರಣರಿಸುಸಿಗಳ ಪ್ರಪತ್ತಿಮಾರ್ಗಕ್ಕೆ ಶರಣಾಗತಿಯೇ ಮುಖ್ಯಧರ್ಮ. ಇದು ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ವಿಶೇಷವಾದುದು. ಭಗವಂತನ ಆಜ್ಞೆಯಂತೆ ನಡೆಯುವುದು, ಅವನಿಗೆ ಪ್ರತಿಯಾಗಿ ನಡೆಯದಿರುವುದು, ಅವನೇ ಶರಣ್ಯನೆಂದು ನಂಬುವುದು, ಅವನನ್ನಲ್ಲದೆ ಮತ್ತಾರನ್ನೂ ರಕ್ಷಕರನ್ನಾಗಿ ಭಾವಿಸದಿರುವುದು—ಇವು ಶರಣಾಗತಿಯ ಬಾಹ್ಯಸ್ವರೂಪ. ಇದು ಸರ್ವರಿಗೂ ಸಾಧ್ಯವಾಗಬಹುದಾದ ಉಪಾಯ. ಆಳ್ವಾರ್ರವರು ತಮ್ಮ ಶರಣಾಗತಿಯನ್ನೂ ಪ್ರಕಾರಾಂತರದಿಂದ ವೈವಾಹಿಕ ಸಂಬಂಧವಾದ ಪ್ರಕ್ರಿಯೆಗಳನ್ನುಪಯೋಗಿಸಿಕೊಂಡು ನಾಯಕನ ವಿಶ್ಲೇಷಣ ದುಃಖದಿಂದ ತಪಿಸುತ್ತಿರುವ ನಾಯಿಕಾವಸ್ಥೆಯಿಂದ ವಿಶದಪಡಿಸಿದ್ದಾರೆ. ಈ ಸಂದರ್ಭದಲ್ಲಿ ಪ್ರಣಯಿಗಳಿಗೆ ಸಂಬಂಧಪಟ್ಟ ಅನೇಕ ಮಾತುಕತೆಗಳೂ ಸನ್ನಿವೇಶಗಳೂ ಬರುವುವು. ಅವುಗಳನ್ನು ಮೇಲೆ ತೋರುವ ಬಾಹ್ಯಾರ್ಥಗಳಿಂದ ಗ್ರಹಿಸಬಾರದು. ಅವುಗಳಿಗೆಲ್ಲ ಪ್ರತ್ಯೇಕವಾದ ಅಂತರಾರ್ಥವಿದೆ. ಆತ್ಮನು ನಾಯಿಕಾವಸ್ಥೆಯಲ್ಲಿ ಶರಣಾಗತಿಯ ಮೂಲಕ ಪರಮಾತ್ಮನನ್ನು ಸೇರುವುದಕ್ಕೆ 'ಆತ್ಮವಿವಾಹ'ವೆಂದು ಸಂಜ್ಞೆ. ಇದರ ವಿವರವು ಸಂಪ್ರದಾಯ ಗ್ರಂಥಗಳಲ್ಲಿ ಈ ರೀತಿ ವಿವೃತವಾಗಿದೆ. 'ಶ್ರಿಯಃಪತಿ'ಯೆಂಬ ಕಾರ್ಮುಗಿಲ ವರ್ಷದಿಂದ ಕೃಪಾಕ್ಷೇತ್ರದಲ್ಲಿ ಜೀವಸಸ್ಯವಂಕುರಿಸುವುದು. ಹಾಗೆಯೇ ಆಶಾಪಿತೃವಿಗೂ ಜ್ಞಾನಮಾತೃವಿಗೂ ಪ್ರಾಣದುಹಿತೃ ಜನಿಸುವಳು. ಇವಳಿಗೆ ಆತ್ಮನೆಂಬ ನಾಮಕರಣವಾಗುವುದು. ಈ ಕನ್ಯೆಯು ಭಗವದ್ಭಕ್ತಿಯೆಂಬ ಆಹಾರದಿಂದ ಅಭಿವೃದ್ಧಿ ಹೊಂದಿ ಕಾಲಾನುಕಾಲದಲ್ಲಿ ಜ್ಞಾನೋತ್ಪತ್ತಿಯಾಗಿ ವಿವಾಹ ವಯಸ್ಕಳಾಗುವಳು. ಆತ್ಮಜ್ಞಾನವೆಂಬ ಅಗ್ನಿಯ ಮುಂದೆ ಈ ಕನ್ಯೆಯು ಪರಮಾತ್ಮನೆಂಬ ವರನಿಗೆ ಧಾರೆಯೆರೆಯಲ್ಪಡುವಳು. ಅದರಂಶವಾಗಿ ಅವಳು ಕೈಂಕರ್ಯಸೂತ್ರದಿಂದಲೂ ನಾಮರೂಪಾಭರಣಗಳಿಂದಲೂ ಅಲಂಕೃತಳಾಗಿ ಭಕ್ತಿಪೀಠಕ್ಕೆ ಕರೆದೊಯ್ಯಲ್ಪಡುವಳು. ಅಲ್ಲಿ ತ್ಯಾಗಕಾಷ್ಠದಿಂದ ಜಾಜ್ವಲ್ಯಮಾನವಾದ ವಿಶ್ವಜ್ಞಾನಾಗ್ನಿಯಲ್ಲಿ ಶರಣಾಗತಿಯೆಂಬ ಹೋಮವನ್ನು ಮಾಡಿ ಅಲ್ಲಿಂದ ಸ್ವರ್ಗಕಲ್ಯಾಣಮಂಟಪಕ್ಕೊಯ್ಯಲ್ಪಟ್ಟು ಆನಂದ ಶಯ್ಯೆಯಲ್ಲಿ ವಿವಾಹಕರ್ಮವನ್ನು ಸಾಂಗಗೊಳಿಸುವಳು. ಈಗ ಆತ್ಮಕನ್ಯೆಯು ಪರಮಾತ್ಮಪತಿಯ ಸಾಕ್ಷಾತ್ಕಾರದಿಂದ ಅವನ ಒಂದು ಭಾಗವೇ ಆಗುವಳು.

ಈ ವಿವರಣದಿಂದ ಆಳ್ವಾರ್ರವರ ನಾಯಕ ನಾಯಕೀ ಭಾವದ ಅರ್ಥವು ವಿಶದವಾಗುವುದು. ಭಗವಂತನನ್ನು ಸೇರಬೇಕೆಂಬ ತನ್ನ ಉತ್ಕಟಾವಸ್ಥೆಯಲ್ಲಿ ಅವರು ತಮ್ಮನ್ನು ವಿರಹಪೀಡಿತಳಾದ ನಾಯಕಿಯಂತೆ ಊಹಿಸಿಕೊಂಡು ಆಕೆಯು ತನ್ನ ನಾಯಕನನ್ನು ಸೇರುವುದರಲ್ಲಿ ಯಾವ ಯಾವ ಅವಸ್ಥೆಯನ್ನು ಪಡೆಯುತ್ತಾಳೆಯೋ ಅವನ್ನೆಲ್ಲ ತಮ್ಮಲ್ಲಿ ಆರೋಪಿಸಿಕೊಂಡು ವಿವರಿಸುವುದನ್ನು ಮುಂದೆ ನೋಡಬಹುದು.

# ನಮ್ಮಾಳ್ವಾರರ ವೈಶಿಷ್ಟ್ಯ

ಈ ಭಕ್ತಕನ್ಯೆಯು ನಾಯಕನಾದ ಭಗವಂತನ ಪ್ರಥಮದರ್ಶನದಲ್ಲಿಯೇ ಅವನಲ್ಲಿ ಮೋಹಿತಳಾಗುವಳು. ಅಂದಿನಿಂದ ಅವಳಿಗೆ ತನ್ನ ಇತರ ಕೆಲಸಗಳಲ್ಲೆಲ್ಲ ಔದಾಸೀನ್ಯ ಹುಟ್ಟುವುದು. ಸದಾ ಅವನನ್ನೇ ಧ್ಯಾನಿಸುತ್ತ ಆಹಾರಾದಿಗಳನ್ನು ತ್ಯಜಿಸುವಳು. ಬಂಧುಗಳೂ ಹಿತವರೂ ಹೇಳಿದ ಮಾತಿಗೆ ಕಿವಿಗೊಡುವುದಿಲ್ಲ. ಅವಳ ಈ ಅವಸ್ಥೆಯನ್ನೂ ಅವಳ ತಾಯಿಯು ತನ್ನ ಸಖಿಯರಿಗೆ ಹೀಗೆಂದು ವರ್ಣಿಸುವಳು.

ಸಖಿಯರಿರ, ನೀವು ಕೂಡ
ಹೆಣ್ಣ ಹೆತ್ತು ಸಲಹಿದಿರಿ,
ಚಪಲೆಯಾದ ಎನ್ನ ಮಗಳ
ಇರವನೆಂತು ಬಣ್ಣಿಸಲಿ
ಶಂಖುವೆಂದು ಚಕ್ರವೆಂದು
ತುಳಸಿಯೆಂದು ಹಗಲಿರುಳೂ
ಇಂತಿಂತೆ ಕೂಗುತಿಹಳು
ಪೇಳಿಮೇನಮಾಳ್ಪುದೆಂದು

ಏನಮಾಳ್ಪೆನೆನ್ನ ಕಿರಿಯ
ಚೆಲುವಮಗಳ್ ಸಖಿಯರಿರ
ಏನಪೇಳೆ ಕೇಳಲೊಲ್ಲಳ್,
ಎನ್ನವಶಮುಮಲ್ಲಮವಳ್
ಮಿಂಚಿನಂತೆ ಪೊಳೆವ ಎದೆಯು
ಕೃಷ್ಣನಡಿಯ ತುಲಸಿಮಾಲೆ
ಬಣ್ಣವಳಿದ ತೊಡರನುಳ್ಳ ಎನ್ನ
ಎದೆಗೆ ಎಂದು ನೋವಳವಳ್

ಭೂಮಿಯನ್ನು ಬಗೆದು ತೋರಿ
ಸ್ವಾಮಿಯಳೆದ ಮಣ್ಣೆಂದೆನ್ನಳ್
ಬಾನಿನೆಡೆಗೆ ಕಯ್ಯಮುಗಿದು
ದೇವನಿರುವನಾಡಿದೆನ್ನಳ್
ಕಣ್ಣತುಂಬ ನೀರತುಂಬ
'ಕಡಲಗುಣ್ಣನುಳ್ಳ'ನುಳ್ಳನೆಂಬಳ್

ಎನ್ನ ಮಗಳಿಂತು ಭ್ರಾಂತಿಗೆದ.
ಸ್ವಾಮಿಗೇನೆಗೆಯ್ವೆನೋ
ಬಳೆಯು ಪಿಡಿದ ಕಯ್ಯವಳು
ಪರವು ಕಡುವ ಕಡಲೆನ್ನಳ್
ಕೆಂಪಾರುವ ರವಿಯುತೋರಿ
ಸಿರಿಯವರನ ಮುಖಿಯೆನ್ನಳ್
'ಬಡೆಯುಲಿಲ್ಲ'ವೆಂದು ಸುಯ್ದು
ಸೀರ್ವಿಡಿದು 'ದೇವ' ಎನ್ನಳ್



ಡಾ॥ ಎನ್. ಅನಂತರಂಗಾಚಾರ್

ಏಣನಂತೆ ಚೆಲುವೆಯಾದ ಕಿರಿಯ
ಹರಯದಿವಳ ಗೆಯ್ಮೆಯರಿಯದಾದೆನೇ

ಸುಡುವಕಿಚ್ಚನಪ್ಪಿ ಬಿಡದೆ ದೇವನೆಂದು
ಸುಯ್ದು ಸುಯ್ದು ಬೇಯದಿಹಳ್
ಸುಳಿಯುವಲರ ತಬ್ಬಿ ತಬ್ಬಿ ಎನ್ನ
ಇನಿಯ ಸ್ವಾಮಿಯೆನ್ನಳ್
ಅವನ ದಿವ್ಯ ತುಳಸಿಮಲರ
ಗಂಧವಲ್ಲಿ ಸುಳಿಯುತಿಹುದು
ಹುಲ್ಲೆಕರುವಿನಂತೆ ತೋರ್ಪ ಇವಳ
ಗೆಯ್ಮೆ ಪಾಪಿಯೆನಗೆ ಒಂದೆ ವಿಧವು

ಪೂರ್ಣಚಂದ್ರನನ್ನು ನೋಡಿ
'ದಿವ್ಯವರ್ಣ'ನೆಂದು ನುಡಿವಳ್
ನಿಂತಬೆಟ್ಟವೊಂದ ನೋಡಿ
'ಸ್ವಾಮಿ ಬಾರೊ' ಎಂದು ಕರೆವಳ್
ಹಿರಿದು ಕರೆವ ಮಳೆಯ ಕಾಣೆ
ದೇವ ಬಂದನೆಂದು ಆರ್ದಳ್

ಎನ್ನ ಚೆಲ್ವ ಕನ್ನೆಯನ್ನು ಎಂದು
ಇಂತು ಭ್ರಾಂತಿಗೆಯ್ದರೋ

ಅವನ ನೆನೆದು ಸುತ್ತನೋಡಿ
'ಬಿಟ್ಟುಹೋದ'ನೆಂದು ಪಾರ್ದಳ್
ಬೆವರ ಸುರಿಸಿ ಮಳೆಯ ಪೋಲ
ಕಣ್ಣನೀರಿಂ ಸುಯ್ಲುಸುಯ್ವಳ್
ಮತ್ತೆ 'ಕೃಷ್ಣ' ಎಂದು ಕೂಗಿ
'ನಾಥ ಬಾರೊ' ಎಂದು ಚೀರ್ದಳ್
ಆಶೆಯಿಂದ ಹುಚ್ಚು ಹಿಡಿದ
ನಿನ್ನವೆಣ್ಣೆ ಗೆಯ್ವನೇನನೋ.

ನಾಯಕಿಯು ಪ್ರಿಯನ ವಿರಹದಲ್ಲಿ ಅನೇಕ ದಿನ ಉಪವಾಸಮಾಡುವಳು, ಜಾಗರಣೆ ಮಾಡುವಳು ಕಣ್ಣಿಗೆ ನಿದ್ರೆಯಿಲ್ಲ; ಮನಸ್ಸಿಗೆ ಶಾಂತಿಯಿಲ್ಲ, ಅವನನ್ನು ಸ್ತೋತ್ರಮಾಡುವಳು; ಬೇಡುವಳು, ನಾಯಕನನ್ನು ಕುರಿತು ಪ್ರಪಂಚದ ಎಲ್ಲ ವಸ್ತುವೂ ನೀನೇ ಆಗಿ ಎಲ್ಲರಿಗೂ ಸಂತೋಷವನ್ನುಂಟು ಮಾಡುವ ನೀನು ನನಗೇಕೆ ಹೀಗೆ ಮಾಡುವೆ ಎನ್ನುವಳು. ಪ್ರಿಯನನ್ನು ಕುರಿತು–

ನಿರಾಗಿ ನೆಲನಾಗಿ ತೀಯೆಲರು ಬಾನಾಗಿ
ಇನಶಶಿಗಳೆರಡಾಗಿ ಶಿವನಾಗಿ ಅಜನಾಗಿ
ಶಂಖ ಚಕ್ರವ ಪಿಡಿದು ಜಗವ ನಲಿಸಿದ ದೇವ
ಎನ್ನೆಡೆಗದೇಕಿಂತು ಒರ್ಮೆಯೂ ಬಾರದಿಹೆ

ಮಾನವರು ಬಾನವರು ನಲಿವಂತೆ ಅದ್ಭುತದ
ವಟುವಾಗಿ ಯೀರಡಿಯೊಳೆರಡು ಲೋಕವನಳೆದ
ಮಾಯವನೆ! ನಿನ್ನ ಬಳಿ
ನಾನಲಿದು ಕುಣಿವಂತೆ
ತಿರೆಯಲೊರ್ಮೆಯೆ ನೀನು
ಬಂದುತೋರಲೆಬೇಕು

ಯುಗಯುಗದಿ ಭೂಮಿಯೊಳು
ಸಂಚರಿಸಿಬಾಳ್ಗೆಯು

( 25 ನೇ ಪುಟ ನೋಡಿ )

## ಹರಿದಾಸವಾಣಿ

# ವಿಜಯದಾಸರ ನುಡಿರತ್ನಮಾಲೆ

"ದ್ವೈತಸಿದ್ಧಾಂತದ ಸಾರಸರ್ವಸ್ವವನ್ನು ಸರಳಭಾಷೆಯ ಸುಳಾದಿಯ ಮೂಲಕ ತಿಳಿಸುವುದರೊಡನೆ ಭಕ್ತನಾಗಬೇಕೆಂಬ ಹಂಬಲವುಳ್ಳ ವ್ಯಕ್ತಿ, ತನ್ನರಿವಿಲ್ಲದಂತೆ ಆಚರಿಸಬಹುದಾದ ಕಾರ್ಯಗಳ ಚಿತ್ರಣ, ವಿಮರ್ಶೆ, ಎಚ್ಚರಿಕೆಗಳನ್ನು ದಾಸರ ಕೃತಿಗಳಲ್ಲಿ ಕಾಣಬಹುದು. ಈ ಎಚ್ಚರಿಕೆಯ ಮಾತುಗಳು ಕೇವಲ ಆಸ್ತಿಕವರ್ಗದವರಿಗೆ ಮಾತ್ರವೇ ಅನ್ವಯಿಸುವುದಿಲ್ಲ. ಸಮಾಜದಲ್ಲಿ ಗೌರವದಿಂದ ಬಾಳಬೇಕೆಂಬ ಹಂಬಲವುಳ್ಳ ಎಲ್ಲ ಕಾಲದ ಎಲ್ಲ ಜನರಿಗೂ ಅನ್ವಯುವಾಗುವಂತಹ ಸಮಾಜ ವಿಮರ್ಶೆಯನ್ನು ವಿಜಯದಾಸರ ಸುಳಾದಿಗಳಲ್ಲಿ ಗುರುತಿಸಬಹುದು.

ದಾಸರು ತಾವು ಕಂಡ ಸಮಾಜದ ಅಂಕು–ಡೊಂಕುಗಳನ್ನು ಕಟೂಕ್ತಿಯಿಂದ ತಿದ್ದಲೆತ್ನಿಸಿದ್ದಾರೆ ಅವರ ಸುಳಾದಿಯಲ್ಲಿ ಬರುವ ನುಡಿಮುತ್ತುಗಳಿಂದ ನಮ್ಮ ನಾವೇ ತಿದ್ದಿಕೊಳ್ಳೋಣವೇ ?

"ಉಸುಗಿನ ಮನೆ ಮಾಡಿ ಶುಶಿಯ ಗುದ್ದಿದರದು।
ವಸುಧೆಗೆ ಬೀಳದಂತೆ ಹಸನಾಗಿ ನಿಲ್ಲುವುದೆ।

ಸಂಸಾರವೆಂಬ ಮರಳಿನ ಮನೆಯನ್ನು ಮಾಡಿ, ಇದು ತುಂಬಾ ಗಟ್ಟಿಮುಟ್ಟಾದ ಮನೆ ಎಂದು ತಿಳಿದ ಮಾನವ ಗುದ್ದಿದರೆ ನೆಲಕಚ್ಚುವುದಲ್ಲದೆ ಗಟ್ಟಿಯಾಗಿ ನಿಲ್ಲುವುದು ಅಸಾಧ್ಯ. ಈ ಮನೆ ನೆಲಕಚ್ಚಲೇಬೇಕು. ಇಂಥದ್ದನ್ನು ನಂಬಬೇಡ ಎಂದು ದಾಸರು ಕಳಕಳಿಯಿಂದ ಹೇಳಿದ್ದಾರೆ.

ಇರಬೇಕು, ಸಂಸಾರದೊಳಿಲ್ಲದಿರಬೇಕು ಕಮಲವು ನೀರಿನಲ್ಲಿದ್ದಂತೆ ಸಂಸಾರದಲ್ಲಿ ನಿರ್ಲಿಪ್ತನಾಗಿದ್ದು ವೈರಾಗ್ಯಭಾಗ್ಯ ತಾಳಬೇಕು.

ಅಂಗಣದೊಳು ಹಕ್ಕಿ ಕುಳಿತು ಹಾರಿದಂತೆ।
ಅಂಗಡಿಯ ನೆರಹಿ ತಿರುಗಿ ಜನ ಪೋದಂತೆ।
ಮುಂಗುಡಿ ಮಕ್ಕಳು ಮನೆಗಟ್ಟಿ ಕೆಡಿಸಿದಂತೆ।

ಇಂಥ ಸಂಸಾರವನ್ನು ನೆಚ್ಚಿ ನೀನು ಕೆಡಬೇಡ ಎಂದು ದಾಸರು ಅಪ್ಪಣೆ ಕೊಡಿಸಿದ್ದಾರೆ.

ಶರೀರ ನನ್ನದು, ಇದರಿಂದ ಏನನ್ನಾದರೂ ಮಾಡಬಲ್ಲೆ ಎಂದು ಸೊಕ್ಕಿನಿಂದ ಹೇಳುವ ಮಾನವನಿಗೆ ದಾಸರಾಯರ ಈ ನುಡಿ—

ಹರುವ ಹರಿಯ ಉದಕ ಕರದಿಂದಲಿ ತಡೆದು।
ಹಿಂದಾಗಿ ನಿಲ್ಲಿಸಿ ಮರಳಿ ಈಸುವೆನೆಂದು।
ಪರಿ ಚಿಂತಿಸದಂತೆ ಧರಣಿಯೊಳಗೆ ಬಂದಾ।
ಶರೀರ ಎನ್ನದೆನಲು ಹುರುಳಿಲ್ಲದ ಮಾತು।

ಅಸ್ಥಿರವಾದ ದೇಹವನ್ನು ನಂಬಬೇಡ, ಹೊರಗೆ ಹೋಗುವ ಉಸಿರು ನಿನ್ನಾಧೀನ ಇರಬಲ್ಲದೆ ?

ನಾನೇ ವಿವೇಕಿ, ಜ್ಞಾನಿ, ಕಳಂಕಗಳನ್ನು ನಿವಾರಿಸುವುದು ನನ್ನಿಂದಲೇ ಸಾಧ್ಯ ಎಂಬ ಅಹಂಕಾರಿಗೆ ವಿಜಯರಾಯರು ತಮ್ಮ ಮಾತುಗಳಲ್ಲಿ ತಿಳಿಹೇಳಿದ್ದಾರೆ —

ಚಂದ್ರನ ಒಳಗೆ ಕಳಂಕವಿರಲು ನೋಡಿ।
ಮಂದಿಯೊಳಗೆ ಬಲು ವಿವೇಕ ಉಳ್ಳವ।
ನೆಂದು ಓರ್ವನು ಎದ್ದು ನಿಚ್ಚಣಿಕೆಯನಿಟ್ಟು।
ಅಂದಿಸಿಕೊಂಡು ಕಳಂಕ ತೆಗೆದುಹಾಕಿ।
ಬಂದುದಲ್ಲದೆ ಬಿಡನೆಂಬೊಂದು ಮಾತು।

ಇಂಥವರ ಮೇಲೆ "ಸಕ್ಕರೆ ಸುರಿದರೆ ಅವರಲ್ಲಿರುವ ವಿಷ ಹೊರಡುವದೆ ?" ಎಂದು ಪ್ರಶ್ನಿಸಿದ್ದಾರೆ.

ಕವಲು ಬುದ್ಧಿಯವರಿಗೆ ಒಂದು ಕಿವಿಮಾತನ್ನು ನಮ್ಮ ಕಿವಿಯಲ್ಲಿ ಪಿಸುಗುಟ್ಟುತ್ತಾರೆ—

ವಾರಿಯನು ತಂದು ಕ್ಷೀರದೊಳಗೆ ಬೆರಸಿ।
ಕ್ಷೀರವಾಗುವುದಾಕಾರ ಒಂದೇ ಎಂಬಿ।
ಧಾರುಣಿಯೊಳಗುಳ್ಳಪಾರ ನದಿಗಳು।
ವಾರಿಧಿಯು ಕೂಡೆ ಬೇರೆಯಾಗದು ಎಂಬಿ।

*　*　*　*

ಕಿವಿಯೊಳು ಗಜ ಒಂದು ಪೊಕ್ಕು
ಕೂಗಿದುದುಂಟೆ।
ಶವ ಎದ್ದು ರಾಜ್ಯಾರ್ಥ ಮಾಡಿ ಬಂದದು
ಉಂಟೆ।
ಜವನ ಕೊಡಲಿ ಜೀವ ಮುಲಿತು ನಿಂದದು
ಉಂಟೆ।
ಕವಣೆಗಲ್ಲಲಿ ಅದ್ರಿ ಸಿಗರಿ ಪೋದುದುಂಟೆ।
ರವಿಯ ಮೇಲೆ ಮಣ್ಣು ತೂರೆ ಮಾನವನತ್ತೆ।
ಭ್ರಮದ ಮನುಷ್ಯನೇ ಬೀಳೋದು ದಾರಿಗೆ।

*　*　*　*

ಸುಂಕದವನ ತಪ್ಪಿಸಿ ಪೋಗುವನೆಂದು ಕಾ–।
ಳಂಕದಲಿ ಪೋಗುತಿರೆ ಮಾರ್ಗ ತಪ್ಪಿ।
ಸಂಕಟವ ಬಿದ್ದು ಭಾಸ್ಕರನುದಯ ಕಾಲಕ್ಕೆ।
ಸುಂಕದವರ ಕೈಯ್ಯ ಸಿಕ್ಕಿದಂತೆ।

ನಿನ್ನ ಕವಲು ಬುದ್ಧಿಯನ್ನು ಬಿಟ್ಟು ತ್ರಿಕರಣದಿಂದ ಪವನನಾಮ ವಿಜಯವಿಠಲನ್ನ ನೆನೆದು ಧನ್ಯನಾಗು ಮುಂಕುಮಾನವನೇ ಎಂದು ಕೊಂಕಾಗಿಯೇ ಹೇಳಿದ್ದಾರೆ.

ಜಾಲಿ ಬೀಜವ ಬಿತ್ತಿ ಬಲಾತ್ಕಾರ ಮುಳ್ಳನು।
ಕಾಲಿಗೆ ಮೂಲಮಾಡಿಕೊಂಡೆ। ಮಾನವನೆ
ನಿನ್ನ ಬಾಳಕ್ಕು
ಅವ್ಯಕ್ತ ವಿಜಯ ವಿಠಲನ ಪಾದಾರವಿಂದ-
ಗಳಲ್ಲಿ
ಆಳಾಗಿ ಮಾಡಿದರೆ, ನಿನ್ನ ದುಃಖೌಘವು
ಗಾಳಿ–
ಪಟವಾಗಿ ಹಾರಿ ಹೋಗುವುವು

ಎಂದು ಅಧಿಕಾರವಾಣಿಯಿಂದ ಹೇಳುತ್ತಾರೆ.

ಕಡಲ ತಡಿಯಲೊಬ್ಬ ಕಡತ ಬಳಪ ಪಿಡಿದು।
ಕಡಲತೆರೆಗಳು ಬಿಡದೆಣಿಸಿ ಬರದೊ।
ಕಡೆಗಾಣುವೆನೆಂದು ಅಡಿ ಇಟ್ಟಲಿಂದ।
ಎಡಬಲನೋಡದಲೆ ಒಡನೊಡನೆಯವೆ।
ಇಡದಲೆ ನೀಕ್ಷಿಸುತ ಧಡಧಡನೇ ಬಂದು।
ಬಡವ ತೆರೆಗಳನು ತಡೆಯದಲೆ ಬರೆದು।
ಮಿಡುಕಿದ ನರನಂತೆ ಮಿಡುಕದಿರು ಮನುಜ।

ಎಂದು ಅವನ ಮಿಡುಕಾಟವನ್ನು ಪರಿಹಾಸ್ಯ ಮಾಡಿದ್ದಾರೆ.

ಅಯೋಗ್ಯರಿಗೆ ತತ್ತ್ವೋಪದೇಶ ಮಾಡ ಕೂಡದು, ಜ್ಞಾನರಹಿತನಿಗೆ ಏನು ಪೇಳಿದರೇನು ತನ್ನ ಗುಣವನ್ನು ಬಿಡುವನೆ ? ಇದಕ್ಕೆ ದಾಸರು ಕೊಡುವ ಉದಾಹರಣೆ—

ಶ್ವಾನನ ತಂದು ಬಾಲ ನೀವಿ ಬಳಗಿಯೊಳು।
ತಾನಿಡಲದರಿಂದ ಮೇಣು ಸರಳವಾಗುವುದೆ।
ಧೇನು ಪಾಲಿಸಿದಂತೆ ಕೋಣನ್ನ ಪಾಲಿಸಿದರೆ,
ಏನಾದರು ಕ್ಷೀರ ಸೊನೆ ಉಂಟೆ।

ನಾನೆಂಬುವ ದುರ್ಮತಿಗೆ ತತ್ತ್ವವನು ಪೇಳಲು ತನ್ನ ಹೀನಗುಣಗಳನ್ನು ಬಿಡಲು ಸಾಧ್ಯವೆ? ಇಂಥ ದುರ್ಮತಿಗೆ ತತ್ತ್ವೋಪದೇಶವನ್ನು ಮಾಡುವುದೆಂದರೆ —

**ಶ್ರೀ ಎಂ. ಕಲ್ಯಾಣರಾವ್**

ಶವ ಬಿಟ್ಟರೂ ಹೋಗಿ ಶಿವಿಗೆ ಹೊಗನಸಿ-
ಟ್ಟು, ಔತಣಕ್ಕೆ ಬಾ ಎಂದು ಹೇಳಲು, ಆ ಶವ ।
ಅವಸರದಿಂದ ಬಂದ, ಸವಿಪಾಕವುಂಡು ಪ್ರ-
ಸ್ತವ ಜನಗಳ ತೃಪ್ತಿಪಡಿಸಬಲ್ಲನೇ? ಎಂ
ದುರ್ಮತಿಗೆ ತತ್ತ್ವೋಪದೇಶ —

"ಹಸುವಿನ ಹಾಲು ಹಿಂಡಿ ಹಸನಾಗಿ ಕಾಸಿ
ಸುರಿ ।
ರಸದ ಕಹಿ ಬೇವು ಗೊಡೆ ಹೊಯ್ದಾ
ಕೊಯ್ದರುವರೇ

ಇಂಥ ಪ್ರುಕ್ಷ ವಿವಾದಿಗೆ ಉಪನಿಷತ್ತನ್ನು ಉಪದೇಶಿಸಿದರೆ ಎಷ್ಟು ಬಿಡದೆ ಮತ್ತೇನು ಮಾಡಿಯಾನು.—

ಕೋಡಗನ ಕೈಗೆ ಕನ್ನಡಿ ಸಿಕ್ಕಿಗೆ
ನೋಡಿ ಸುಖಿಸಬಲ್ಲುದೆ
"ಕಳ್ಳನು ಹಾಲನು ಕರತಂದು ಮಜ್ಜಿಗೆ ಹುಳಿ
ಹೆಪ್ಪು -
ಗೊಡಲು ಫಲವಿಲ್ಲವುದು ಮರುಳೆ"

ಸರಳ ಪರಮತತ್ತ್ವದ ಸಾರ ತಿಳಿದು, ತಾರತಮ್ಯ ಪಂಚಭೇದವನ್ನು ತಿಳಿದು ಸಾಧನೆಗೈವ ಹರಿ ಭಕ್ತನಿಗೆ ಯಾವ ಭಯವಿಲ್ಲ –

ಗಾಳಿಗೆ ಜೀವಿಲ್ಲ ನಿನ್ನವಗೆ ಕೇಡಿಲ್ಲ ।
ನ್ಯಾಳ ವಿಜಯ ವಿಠಲ ನಿನ್ನ ಬಿಟ್ಟವ ಕೆಟ್ಟ

ನಗರಿವಿಲ್ಲದಂತೆ ಸಾಸಿವಲ್ಲಿ ಸ್ವಸ್ತಿ ಮನದಲ್ಲಿದ್ದು ಶ್ರೀ ಹರಿಯನ್ನು ನಂಬಿ ಲಾಭ ಪಡೆಯುವನಾಗುವ ದನ್ನು ಬಿಟ್ಟು, ಅನ್ಯಭಜನೆಗೆ ಬಿದ್ದು ಸಂಪಿನಲ್ಲ ನಗುವ ಜಾಣರನ್ನು ಕಂಡ ವಿಜಯರಾಯರು –

ಕಸ್ತೂರಿಗೆ ಪ್ರೋ । ಕಂಡ ಕಡಿಗೆ ತಿರುಗಿ ।
ಮಸ್ತರವಾಗಿದ್ದರನ್ಯಾವ ಪೊಕ್ಕಂತೆ ।
ಹಸ್ತದೊಳು ತೋರುವ ವಿದ್ಯೆಯ ಓದದಲೆ ।
ಪುಸ್ತಕವನೆ ನೋಡಿ ಪಠಿಸಿ ಕೊಂಬುವನಂತೆ ।
ವಸ್ತು ಮುಂದಿಟ್ಟಿರಲಿ ವಶವಮಾಡಿಕೊಳದೆ ।
ಅಸ್ತಿಮಾನಪಡಿದು ಒಳಲಿ ಸೊರಗಿದಂತೆ ।
ವಸ್ತ್ರಇದ ಮೇಲೆ ಮಣ ಮಕುಟವೆ ಇರಲು ।
ಹಸ್ತ ತೂಕದ ಕಲ್ಲು ಪೊತ್ತು ತಿರುಗಿದಂತೆ ।

—ಎಂದು ವಿವರವಾಗಿ ತಿಳಿಸಿದ್ದಾರೆ.

ಕೋಪ, ಮುನಿಸು ಮನುಷ್ಯನಿಗೆ ಸಲ್ಲದು—

ಕುದುರಿಯ ಮೇಲೆ ಕೋಪದಿ ಪೊಗಿ
ರಾಸಭನೇ– ।
ರಿದ ತೆರದಿ ಕಾಣೊ ದುರುಳಗಿಂಗೆ ।

ಸಿಧಿ ಮೇಲೆ ಮುನಿದು ತಿಪ್ಪೆ ಮೇಲಿನ ಬೂದಿ ।
ಸದನದೊಳಗೆ ತಂದು ಹಾಕಿದಂತೆ ।
ಇದರಿಂದ ಯಾರಿಗೆ ಲಾಭ ?–

ಹಕ್ಕಲು ದೇವರುಗಳನ್ನು ನಂಬಿ ಕೆಡಬೇಡ,
ಹಕ್ಕಲ ದೈವಗಳ
ಹಾವಿಗೆಯೇಲಿ ಬಡಿದು, ರಕ್ಕಸಾಂತಕ ವಿಜಯ
ವಿಠಲನ್ನ ಕೊಂಡಾಡು,

ಇಲ್ಲವಾದರೆ–

ಸುಣ್ಣ ಕರ್ದಮ ಕ್ಷೀರವನ್ನು ಕೂಡಿಸಿ ದಿ– ।
ವ್ಯಾನ್ನದೊಡೆ ಉಂಬೋ ಕನ್ನನಂತೆ
ಕಾಣಿರೋ
ಅನ್ಯಾಯವಾಹದು ಅರಣ್ಯದೊಳು ಪೊಕ್ಕು ।
ಮಣ್ಣು ತೂರಿ ತೂರಿ ಧಾನ್ಯ ಆರಿಸಿದಂತೆ ।
ಕನ್ನಡಿ ತಿರಿವಿಡಿದು ತನ್ನ ನೋಡಿಕೊಂಡಂತೆ ॥

ನಿನ್ನ ಬಾಳು ಹಾಳಾಗುವುದರಲ್ಲಿ ಸಂದೇಹವೇ ಇಲ್ಲ. ಎಂದು ದಾಸರು ದೃಢವಾಗಿ ಹೇಳುತ್ತಾರೆ

ಸಜ್ಜನರ ನಿಂದೆಮಾಡದಿರು, ದುರ್ಜನರಿಗೆ ಅಳುಕದಿರು, ದುರ್ಜನರ ನಿಂದೆಯನ್ನು ಸಹಿಸಿ ಹರಿ

( 2ನೇ ಪುಟ ನೋಡಿ )

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಶ್ರೀ ಜಗನ್ನಾಥದಾಸರ ಕೊಡುಗೆ

ಹರಿದಾಸ ಸಾಹಿತ್ಯದ ಪ್ರಸಿದ್ಧ 'ದಾಸ ಚತುಷ್ಟಯ'ದಲ್ಲಿ ಜಗನ್ನಾಥದಾಸರು ಕೊನೆಯವರು. ಇವರ ಕಾಲ ಕ್ರಿ.ಶ 1728 ರಿಂದ 809. ಹರಿದಾಸ ಶ್ರೇಷ್ಠರೆನಿಸಿದ ಪುರಂದರದಾಸರಿಂದ ಸ್ವಪ್ನದಲ್ಲಿ ಅನುಗ್ರಹೀತರಾದ ವಿಜಯ ವಿಜಯದಾಸರ ಪ್ರೇರಣೆಯಿಂದ ಗೋಪಾಲದಾಸರು ನೀಡಿದ ನಾಲ್ವತ್ತು ವರ್ಷ ಆಯುಸ್ಸನ್ನು ಪಡೆದು ಹರಿದಾಸರೆನಿಸಿದ್ದು ಜಗನ್ನಾಥದಾಸರ ಪುಣ್ಯವಾದಂತೆಯೇ ಕನ್ನಡಿಗರ ಪುಣ್ಯವೂ ಆಯಿತು.

ಪಂಡಿತ ಶ್ರೀನಿವಾಸಾಚಾರ್ಯರು ಅಹಂಕಾರವಶಾತ್ ವಿಜಯದಾಸರನ್ನು ಒಮ್ಮೆ 'ಕೂಸೀಮಗದಾಸ' ಎಂದು ಅವಹೇಳನ ಮಾಡಿ ವಿಶಿಷ್ಟ ಉದರ ರೋಗವೊಂದಕ್ಕೆ ತುತ್ತಾದರು.

ಅವರಿಗೆ ಒದಗಿದ ಉದರರೋಗ ಅವರ ಮನಸ್ಸಿಗೆ ತಗುಲಿದ್ದ ಅಹಂಕಾರ ರೋಗಕ್ಕೆ ದಿವ್ಯ ಔಷಧವಾಗಿ ಪರಿಣಮಿಸಿದ್ದು ಅವರ ಪೂರ್ವಸಾಧನೆಯ ಹಿರಿಮೆಗೆ ದ್ಯೋತಕ. ಇಂತಹ 'ಹರಿದಾಸ ದೀಕ್ಷೆ' ಅವರಿಗೆ ಲಭಿಸುವಲ್ಲಿ ವಿಜಯದಾಸರು ಹಾಗೂ ಗೋಪಾಲದಾಸರುಗಳ ಪಾತ್ರ ತುಂಬಾ ಹಿರಿದು. ಹರಿದಾಸರನ್ನು ಅವಹೇಳನ ಮಾಡಿಯೂ ಶ್ರೀನಿವಾಸಾಚಾರ್ಯರಂತೆ ಉದ್ಧಾರವಾದ ವ್ಯಕ್ತಿಗಳು ದುರ್ಲಭ. ಅವಹೇಳನ ಮಾಡಿದ ವ್ಯಕ್ತಿಯನ್ನು ಕ್ಷಮಿಸಿ ಉದ್ಧರಿಸಿದ ವಿಜಯದಾಸರಂತಹ ಮಹನೀಯರೂ ಅಷ್ಟೇ ದುರ್ಲಭ. ಗುರುಗಳ ಮಾತನ್ನು ಶಿರಸಾವಹಿಸಿ ತಮ್ಮ ಆಯುಷ್ಯವನ್ನೇ ಧಾರೆಯೆರೆದು ಜಗನ್ನಾಥದಾಸರ ಬಾಳನ್ನು ರೂಪಿಸಿದ ಗೋಪಾಲದಾಸರ ಮಹಾತ್ಯಾಗ, ತಪಃಸಿದ್ಧಿಗಳೂ ತುಂಬ ಅ ಸಾ ಧಾ ರ ಣ. ಆಯುರ್ದಾನದಲ್ಲೇ ಬಾಳಿನ ಸಾರ್ಥಕ್ಯವನ್ನು ಕಂಡ ಆ ಹಿರಿಯ ಚೇತನ ಕಲಿಸುವ ಪಾಠ ತುಂಬಾ ದೊಡ್ಡದು. ಹೀಗೆ ಹರಿಗುರುಗಳಿಂದ ದೊರೆತ ಸಮಸ್ತ ಆಯುಷ್ಯವನ್ನೂ ಭಗವತ್ಕೃಪೆ, ಚಿಂತನೆ, ಪ್ರಸಾದಗಳಿಗೆಂದೇ ವಿನಿಯೋಗಿಸಿದ ಜಗನ್ನಾಥದಾಸರ ಬಾಳು ನೀಡುವ ಬೆಳಕು ಉತ್ಕೃಷ್ಟವಾದುದು. ಇಷ್ಟೆಲ್ಲ ಹಿನ್ನೆಲೆಯಲ್ಲಿ ಹರಿದಾಸರೆನಿಸಿದ ಜಗನ್ನಾಥದಾಸರ ಕೊಡುಗೆಗೆ ಸಹಜವಾಗಿಯೇ ಹೆಚ್ಚು ಅರ್ಥವಿದೆ. ಮಹತ್ವವಿದೆ.

ಜಗನ್ನಾಥದಾಸರು ರಚಿಸಿದ ಒಟ್ಟು ಕೃತಿಗಳ ಸಂಖ್ಯೆ ಇಂತಿಷ್ಟೇ ಎಂದು ತಿಳಿಸುವ ಯಾವ ದಾಖಲೆಯೂ ಇಲ್ಲ ಇಂದು 195 ಕೀರ್ತನೆಗಳು, ಎರಡು ಉಗಾಭೋಗಗಳು, ಮೂರು

**ಶ್ರೀ ವ್ಯಾಸನಕೆರೆ ಪ್ರಭಂಜನ**

ಸುಳಾದಿಗಳು, 413 ತತ್ತ್ವ ಸುವ್ವಾಲಿಗಳು, ಹಾಗೂ 'ಹರಿಕಥಾಮೃತಸಾರ'ವೆಂಬ 988 ಭಾಮಿನೀ ಷಟ್ಪದಿಗಳ ಉದ್ಗ್ರಂಥ– ಇವಿಷ್ಟು ಅವರ ಹೆಸರಿನಲ್ಲಿ ಉಪಲಬ್ಧವಿರುವ ಕೃತಿಗಳು. ಅವರು ಹರಿದಾಸದೀಕ್ಷೆ ಕೈಗೊಳ್ಳುವ ಪೂರ್ವದಲ್ಲಿ ರಚಿಸಿದ ಶ್ರೀ ವರದೇಂದ್ರ ಪಂಚಶ್ಲೋಕಿ, ಶ್ರೀಸತ್ಯಬೋಧ ಪಂಚಶ್ಲೋಕಿ ಎಂಬ ಸಂಸ್ಕೃತ ಕೃತಿಗಳು ಸಹ ಉಪಲಬ್ಧವಿವೆ. ಶ್ರೀಪಾದರಾಜರ 'ಮಧ್ವನಾಮ'ಕ್ಕೆ ಇವರು ರಚಿಸಿರುವ 'ಫಲಶ್ರುತಿ' ಕನ್ನಡದ ರಚನೆ. ಕೀರ್ತನೆಗಳು, ಗುರುಸ್ತುತಿ, ದೇವತಾಸ್ತುತಿ, ಪರಮಾತ್ಮಸ್ತುತಿ, ತೀರ್ಥಕ್ಷೇತ್ರಗಳ ವರ್ಣನೆ, ಉಪದೇಶಪರತಾತ್ತ್ವಿಕ ಪದಗಳು, ಮೊದಲಾಗಿ ಅನೇಕ ವಿಧವಾಗಿ ಅವರ ಕೀರ್ತನೆಗಳಿವೆ.

ಪರಮಾತ್ಮನ ಮೂಲರೂಪ, ನೃಸಿಂಹಾದಿ ಅವತಾರ ರೂಪಗಳು ಶ್ರೀವೆಂಕಟೇಶಾದಿ ಕ್ಷೇತ್ರಸ್ಥ ಭಗವದ್ರೂಪಗಳ ವರ್ಣನೆಗಳನ್ನು ಅವರ ಕೃತಿಗಳಲ್ಲಿ ವಿಶೇಷವಾಗಿ ಕಾಣಬಹುದು. ಲಕ್ಷ್ಮಿ, ಬ್ರಹ್ಮ, ವಾಯು, ಸರಸ್ವತಿ, ಭಾರತಿ, ಗರುಡ, ಶೇಷ, ರುದ್ರರು ಮೊದಲಾದ ವಿಶಿಷ್ಟ ದೇವತೆಗಳನ್ನು ಕುರಿತು ಬರೆಯಲ್ಪಟ್ಟ ಸಂಶೋಧನ ಪ್ರಬಂಧಗಳಂತೆ ಬಹುವಿಷಯ ಬೃಂಹಿತವಾಗಿವೆ. ಮೂಲಗ್ರಂಥಗಳಲ್ಲಿ ಕಂಡು ಬರುವ ದೇವತಾ ಸಂಬಂಧ ವಿಷಯಗಳನ್ನು ಮನನಾನುಕೂಲಿಯಾಗುವಂತೆ ಸಂಗ್ರಹಿಸಿಕೊಡುವ ಕೀರ್ತನೆಗಳು ಓತಪ್ರೋತವಾಗಿವೆ. 'ಆ ನಮಿಪೆ ಶ್ರೀ ಬ್ರಹ್ಮ ವಾಯುವಾಣಿ ಭಾರತಿ ಮುಖ್ಯರವತಾರ ಆವೇಶಕಾನಮಿಪೆ' ಎಂಬ 73 ನುಡಿಗಳ ದೀರ್ಘ ಕೃತಿಯಲ್ಲಿ ದೇವತಾ ತಾರತಮ್ಯ – ಅವತಾರ – ಆವೇಶಾದಿಗಳ ವಿವರಗಳೆಲ್ಲ ಸಂಗ್ರಹಿತವಾಗಿವೆ. ಮತೀಯ ಗುರುಪರಂಪರೆಯನ್ನು ಸ್ತುತಿಸುವ ಕೃತಿಗಳೂ, ಶ್ರೀಮದಾಚಾರ್ಯರು, ಜಯತೀರ್ಥರು, ವಾದಿರಾಜರು, ಕೃಷ್ಣದ್ವೈಪಾಯನ ತೀರ್ಥರು ರಾಘವೇಂದ್ರತೀರ್ಥರು, ವರದೇಂದ್ರ ತೀರ್ಥರು, ಸತ್ಯಬೋಧರು, ಭುವನೇಂದ್ರರು, ವಸುಧೇಂದ್ರರು, ಸತ್ಯವರತೀರ್ಥರುಗಳ ಸ್ತೋತ್ರಗಳು ಗುರುಸ್ತೋತ್ರ ವಿಭಾಗದಲ್ಲಿ ಕಂಡುಬರುತ್ತವೆ. ಪುರಂದರದಾಸರು, ವಿಜಯದಾಸರು, ಗೋಪಾಲದಾಸರು, ನೃಸಿಂಹದಾಸರುಗಳನ್ನು ಸ್ತುತಿಸುವ ಕೃತಿಗಳೂ ಉಂಟು. ವರದಾ, ಕೃಷ್ಣವೇಣಿ, ಯಮುನಾ, ಭಾಗೀರಥಿ, ಕಾವೇರಿ ನದಿಗಳನ್ನೂ, ಸ್ವಾಮಿ ಪುಷ್ಕರಿಣಿ ಮಧ್ವಸರೋವರ ತೀರ್ಥಗಳನ್ನು ವರ್ಣಿಸುವ ಕೃತಿಗಳಲ್ಲದೆ ನದೀಸರೋವರಗಳ ತಾರತಮ್ಯವನ್ನು ತಿಳಿಸುವ "ಭಾಗೀರಥ್ಯಾದಿ ನದಿಗಳ ತಾರತಮ್ಯ ನಿಜ ಭಾಗವತ ತಿಲಕ ನಿಮಿರಾಜ ಗೊಲಿದು ವಸಿಷ್ಠ ಯೋಗೀಶ ಪೇಳೆ ಸುಕಥಾ ಕುತೂಹಲವನುರಾಗದಲಿ ಕೇಳಿ ಜನರಯ್ಯಾ" ಎಂಬ ಒಂದು ಕೃತಿ ಮತ್ತು ತೀರ್ಥ ಕ್ಷೇತ್ರಗಳ ನಾಮ ನಿರ್ದೇಶನ ಮಾಡುವ "ಸ್ಮರಿಸಿ ತೀರ್ಥ ಕ್ಷೇತ್ರ ಸಜ್ಜನರು ಸತ್ಯದಲಿ ಅರುಣೋದಯದ



# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮು,

### ಶನಿ, ಭಾನು, ಸೋಮ ಮತ್ತುಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ, 2ನೇ ಅರ್ಚನೆ.
,, 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ (ಅರ್ಜಿತ)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 6–30 ವರೆಗೆ ಅಭಿಷೇಕ (ಅರ್ಜಿತ)
,, 6–30 ರಿಂದ 8–00 ವರೆಗೆ ಸಮರ್ಪಣೆ
,, 8–00 ರಿಂದ 9–00 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9–00 ರಿಂದ 9–30 ವರೆಗೆ ಬಲಿ, ಶಾತ್ತುಮೊರೆ
,, 9–30 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಶುಕ್ರವಾರಗಳಲ್ಲಿ ಉಯ್ಯಾಲೆಸೇವೆ, ವಾಹನ ಸೇವೆಗಳು, ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.

ಲೆದ್ದು ಭಕ್ತಿಪೂರ್ವಕವಾಗಿ ರಣಶ್ರವುದಿ ಮೂಲ್ಯಕ ಪಾಪರಾಶಿಗಳ ಪರಿಹರಿಸುತ್ತ ಸಂತೈಸುವ'' ಎಂಬ ಮತ್ತೊಂದು ಕೃತಿಯನ್ನೂ ರಚಿಸಿದ್ದಾರೆ.

ಈ ಬಗೆಯ ಕೃತಿಗಳು ಆಯಾ ದೇವತೆಗಳು, ಗುರುಗಳು, ತೀರ್ಥ ಕ್ಷೇತ್ರಗಳ ರಿಚಯ ಮಾಡುತ್ತಲೇ ಭಗವಂತನ ಹಿರಿಮೆಯನ್ನು ಪರಿಣಾಮಕಾರಿಯಾಗಿ ನಿರೂಪಿಸುವ ಮೂಲಕ ಅವರೆಲ್ಲರ ಬಗ್ಗೆಯೂ ಯಥೋಚಿತವಾಗಿ ಭಕ್ತಿಯನ್ನು ಹುಟ್ಟಿಸುತ್ತವೆ. ವಿಜಯದಾಸರನ್ನು 'ರತುನ'ವೆನ್ನುವ ಅವರ ರೂಪಕವು (ರತುನ ದೊರಕಿತಲ್ಲ ಎನಗೆ ದಿವ್ಯರತುನ ದೊರಕಿತಲ್ಲ) ನಮ್ಮ ಜೀವನದಲ್ಲಿ ಗುರುಗಳಿಗಿರುವ ಹಿರಿಮೆಯ ಸ್ಥಾನವನ್ನು ಅರ್ಥಪೂರ್ಣವಾಗಿ ಮನವರಿಕೆ ಮಾಡಿಕೊಡುತ್ತದೆ;

ಶ್ರೀ ವೆಂಕಟಾಚಲವಾಸ ನಿನ್ನ
ಸೇವಾನುಸೇವಕರ ದಾಸಾನುದಾಸ ಎನಿಸಿ
ಜೀವಿಸುವ ನರಗೆ ಯಾಕೆ ಆಯಾಸ
ಶ್ರೀವರನೆ ಕೊಡು ಎಮಗೆ ಲೇಸ

—ಎಂಬ ಅವರ ಕೃತಿಯಲ್ಲಿ ಸಂಗ್ರಹಗೊಂಡಿರುವ ಶಾಸ್ತ್ರಾರ್ಥ ಅಚ್ಚರಿ ಉಂಟುಮಾಡುವಂತಹುದು.

ಬಾಳಿನ ಸಾರ್ಥಕ್ಯದ ಬಗ್ಗೆ ಶಾಸ್ತ್ರಾರ್ಥವನ್ನೆಲ್ಲ ಇಡಿಯಾಗಿ ಸಂಗ್ರಹಿಸಿಕೊಡುವ ಅವರ 'ಫಲವಿದು ಬಾಳ್ದುದಕೆ' ಎಂಬ ಕೃತಿ ನಮ್ಮ ಜೀವನ ದೃಷ್ಟಿಯನ್ನೇ ವಿಶಾಲವಾಗಿಸುವ ಒಂದು ಮಹತ್ವದ ಕೃತಿ. ಒಂದರ್ಥದಲ್ಲಿ ಅದು 'ಅಣು ಹರಿಕಥಾಮೃತಸಾರ'ವೇ ಆಗಿದೆ.

ಸಜ್ಜನರ ಸ್ವಭಾವವನ್ನು ಚಿತ್ರಿಸುವ 'ಮುಕ್ತನಲ್ಲವೇ ಭವದಿ ಮುಕ್ತನಲ್ಲವೆ, ಶಕ್ತನಾದ ಹರಿಯ ಪರಮ ಭಕ್ತಿಯಿಂದ ಭಜಿಪ ನರನು', ನೀಚನ ಲಕ್ಷಣವನ್ನು ಸಂಗ್ರಹಿಸುವ 'ನೀಚನಲ್ಲವೇ ಇವನು ನೀಚನಲ್ಲವೆ, ಕೀಚಕಾರಿ ಪ್ರಿಯನ ಗುಣವ ಯೋಚಿಸದಲೆ ಇದ್ದ ನರನು,' ಭಗವದ್ಭಕ್ತರ ವಿಚಿತ್ರ ಪರಿಯನ್ನು ನಿರೂಪಿಸುವ 'ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ ಸಂಗ ಸುಖವಿತ್ತು ಕಾಯೋ ಕರುಣಾಸಾಗರ', ಕಾಲ ಕಳೆಯುವ ಸಾರ್ಥಕ ರೀತಿಯನ್ನು 'ಕೀರ್ತಿಸದೆ ಕೃಷ್ಣಾರ್ತಿಯಿಂದ',— ಮೊದಲಾದ ಕೃತಿಗಳಲ್ಲಿನ ಸಂಗ್ರಹಣ ಕೌಶಲ ಬೆರಗುಗೊಳಿಸುವಂತಹುದು.

ಮನುಷ್ಯ ಮಾಡುವ ಮುಖ್ಯ ಪಾಪ ಕಾರ್ಯಗಳ ಪಟ್ಟಿಯನ್ನು ವಿವರವಾಗಿ ಒದಗಿಸುವ 'ಸಿರಿ ರಮಣ ತವಚರಣ ದೊರಕುವುದು ಹ್ಯಾಂಗಿನ್ನು ಪರಮ ಪಾಪಿಷ್ಠ ನಾನು', 'ಗತಿಯಾವುದೆನಗೆ ಶ್ರೀ ಪತಿಯೆ ಪೇಳೆನಗೆ', ಮತ್ತು 'ಶ್ರೀ ಮಧ್ವ ಚಿತ್ತ ಮಂದಿರನೆ ನಿನ್ನಯ ಚರಣತಾಮರಸ ನೆರೆ ನಂಬಿದೆ'— ಎನ್ನುವ ಕೃತಿಗಳು ಆತ್ಮ ವಿಮರ್ಶೆಗೆ ಸಾಧನವನ್ನು ಒದಗಿಸುವಲ್ಲಿ ತುಂಬಾ ನೆರವಾಗುತ್ತವೆ.

ಸಾಕಲ್ಯದಿಂದ ಸಾಲಿಗ್ರಾಮಕೆ ಅಭಿಷೇಕ—
ವಾಕಳ್ವಾಲಿ ಮಾಡದೆ
ನಾಕೆಂಟು ನಾಯಿಗಳ ಸಾಕಿ ಮನೆಯೊಳು
ಬದುಕಬೇಕೆಂದು ಹಾಲು ಹೊಯ್ದೆ
ಕಾಕು ಬುದ್ಧಿಗಳಿಂದ ಗುಡುಗುಡಿ ನಸಿ ಪುಡಿಯ
ಹಾಕಿ ಭಂಗಿಯ ಸೇದಿದೆ
ಲೋಕ ನಿಂದಕನಾಗಿ ಪಾಪಕ್ಕೆ ಕೈಹಚ್ಚಿ
ಅನೇಕ ಜೂಜುಗಳಾಡಿದೆ ಬಿಡದೆ

—ಎನ್ನುವ ಮಾತುಗಳಂತೂ ಇಂದಿನ ಸಮಾಜದ ಕಟುವಿಡಂಬನೆಯೇ ಆಗಿವೆ

ಸ್ತ್ರೀ ಧರ್ಮಗಳನ್ನು ವಿಧಿನಿಷೇಧಗಳನ್ನು ಸಂಗ್ರಹಿಸುವ 'ಸಾರಿದ ಡಂಗುರ ಯಮನು—ಪಾಪಿ ನಾರಿಯರ ನೆಳೆತಂದು ನರಕದೊಳಿಡಿರೆಂದು' ಎಂಬ ಕೃತಿ, ಭಗವಂತನನ್ನು ಬೇಡುವ ಪರಿಯನ್ನು ತಿಳಿಸುವ 'ಕರುಣಿಸೆನಗಿನಿತು ಕರುಣಾಳು ನಿನ್ನ ಚರಣಾಬ್ಜ ಭಕುತಿ, ವಿಷಯದಿ ವಿರಕುತಿ', 'ಇದನೆ ಪಾಲಿಸು ಎನಗೆ ದೇವಾ ಇದನೆ ಪಾಲಿಸು ಜನ್ಮ ಜನ್ಮಗಳಲ್ಲೂ', ಎಂಬ ಕೃತಿಗಳೂ, ಹರಿದಾಸರ ಲಕ್ಷಣಗಳನ್ನು ವರ್ಣಿಸುವ ಹರಿದಾಸರಿಗೆ ಒಬ್ಬರ ಪರಿವೆಯೇತಕೆ', 'ದಾಸರಿಗುಂಟೆ ಭಯಶೋಕ', 'ಆವ ಭಯವಿಲ್ಲವೊ, ಆವ ಭಯವಿಲ್ಲ, ಆವ ಭಯ ವಿಲ್ಲ ಪರಾವರೇಶನ ಸಕಲ ಠಾವಿಲಿ ಚಿಂತಿಸುವ ಭಾವಜ್ಞ ಜನರಿಗಿನ್ನು', 'ಸಂತರೆನ್ನಬಹುದು ಸಜ್ಜನರವರನಾ ಇಂಥ ಗುಣಗಳಿಂದ ಯುಕ್ತರಾಗಿಪ್ಪವರನಾ', ಎಂಬ ಕೃತಿಗಳೂ, ವೈಕುಂಠವನ್ನು ವರ್ಣಿಸುವ 'ಎಂಥಾದೋ ವೈಕುಂಠ ವೆಂಥಾದೋ', ಸಾರ್ಥಕ ಜೀವನದ ಪರಿಯನ್ನು ನಿರೂಪಿಸುವ 'ಇನಿತೆಂದು ಶಾಸ್ತ್ರ ಪೇಳುವುವು ಪುನಃ ಪುನಃ ಭಗವತ್ಪ್ರಾಪ್ತಿ ಬೇಕೆಂಬುವವರಿಗೆ', 'ಮನವೇ ಮರೆವರೇನೋ ಹರಿಯ', ವ್ಯಾಪ್ತ ಪೂಜೆಯ ಬಗೆಯನ್ನು ಅರುಹುವ 'ಅರಿತವರಿಗತಿ ಸುಲಭ ಹರಿಯ ಪೂಜೆ', ಜಗತ್ ವೃಕ್ಷವನ್ನು ವಿವರಿಸುವ 'ಜಗದಾಖ್ಯ ವೃಕ್ಷವನು ಚಿಂತಿಸುವುದು ಬುಧರು', 'ತಿಳಿವುದನ್ನಮಯ ಕೋಶವನು'— ಮೊದಲಾದ ಕೃತಿಗಳೂ ಸಹ ಮಹತ್ತರವಾಗಿವೆ. 'ಶಿವನೀನೆಂತಾದಿ ಮನುಜ ಪಶು' ಎಂದು ಶೈವಾದ್ವೈತದನ್ನು ಖಂಡಿಸುವ ಕೃತಿಯಲ್ಲಿನ ಶಿವ ಮಹಿಮಾ ನಿರೂಪಣೆಯು ರಮ್ಯವಾಗಿದೆ. 'ನಿನ್ನವರ ಧರ್ಮ ವಿಹಿತವಾಗುವುದು, ಮತ್ತನ್ಯ ರಾಚರಿಸಿದ ಧರ್ಮ ಅಧರ್ಮ, ಎಂಬ ಕೃತಿ 'ಧರ್ಮೋ ಭವತ್ಯಧರ್ಮೋಽಪಿ ಕೃತೋ ಭಕ್ತೈಸ್ತವಾಚ್ಯುತ', "ಪಾಪಂ ಭವತಿ ಧರ್ಮೋಽಪಿ ಯೋನ ಭಕ್ತ್ಯಾ ಕೃತೋ ಹರೇ"

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ—517501

ಎಂಬ ಶಾಸ್ತ್ರ ವಾಕ್ಯದ ರಮ್ಯ ವ್ಯಾಖ್ಯಾನವೇ ಆಗಿದೆ.

ಒಟ್ಟಿನಲ್ಲಿ ಅವರ ಪ್ರತಿಯೊಂದು ಕೀರ್ತನೆಯೂ ಒಂದೊಂದು ಕಾರಣಕ್ಕಾಗಿ ತುಂಬ ಮುಖ್ಯವೆನ್ನಿಸುತ್ತದೆ.

ಆರು ವಂದಿಸಲೇನು ಆರುನಿಂದಿಸಲೇನು
ಆರು ಶಾಪಿಸಲೇನು ಆರು ಕೋಪಿಸಲೇನು
ಆರು ಮುನಿದು ಮಾತಾಡದಿದ್ದರೆ ಏನು
ಮಾರುತಾಂತರ್ಯಾಮಿ ಜಗನ್ನಾಥ ವಿಠಲನ
ಕಾರುಣ್ಯ ಪಾತ್ರರ ಕರುಣವೆನ್ನೊಳಗಿರೆ

—ಎಂಬ ಉಗಾಭೋಗದಲ್ಲಿ ಭಗವದ್ಭಕ್ತರ ಅನುಗ್ರಹ ಹೇಗೆ ಭಗವಂತನ ಅನುಗ್ರಹಕ್ಕೆ ದಾರಿಯಾಗುತ್ತದೆ ಎಂಬುದನ್ನು ಸುಂದರವಾಗಿ ತಿಳಿಸುತ್ತಲೇ, ಅಂತಹವರಿಗೆ ಇತರರು ನಿಂದನೆ, ವಂದನೆ, ಕೋಪಶಾಪ, ಮೌನ— ಇತ್ಯಾದಿಗಳೆಲ್ಲ ಹೇಗೆ ಅಕಿಂಚಿತ್ಕರ ಎಂಬುದನ್ನು ಮಾರ್ಮಿಕವಾಗಿ ಸ್ಫುಟ ಪಡಿಸಿದ್ದಾರೆ.

'ಅನಘಾನೆಂದೊಮ್ಮೆ ನೆನೆದ ಮಾನವ ಪಾಪ ವನಧಿ ದಾಟುವ ಒಹುವೇಗದಿಂದ' ಎಂಬ ಮತ್ತೊಂದು ಉಗಾಭೋಗದಲ್ಲಿ ನಿರ್ದೋಷತ್ವೇನ ಭಗವದುಪಾಸನೆ ಹೇಗೆ ಸರ್ವಾನಿಷ್ಟ ನಿವೃತ್ತಿರೂಪ ಮಹಾಫಲಕ್ಕೆ ಸಾಧನವಾಗುವುದು ಎಂಬುದನ್ನು ವರ್ಣಿಸಿದ್ದಾರೆ.

ದಾಸರ ಉಪಲಬ್ಧವಿರುವ ಮೂರು ಸುಳಾದಿಗಳೂ ಭಗವಂತನ ಸ್ತವನರೂಪವಾಗಿದ್ದು (ದುರಿತವನ ಕುಠಾರ ದುರ್ಜನ ಕುಲವೈರಿ ಶರಣಾಗತ ವಜ್ರಪಂಜರ.........ಇತ್ಯಾದಿ) ಅನೇಕ ದೃಷ್ಟಿಯಿಂದ ಭಗವಂತನ ಸರ್ವೋತ್ತಮತ್ವವನ್ನು ಪ್ರತಿಪಾದಿಸುತ್ತ ಉಪಯುಕ್ತವಾಗುತ್ತವೆ.

ತ್ರಿಪದಿಗಳ ವಿಶೇಷ ರೂಪವಾದ ಸುವ್ವಾಲಿಗಳು ಜಗನ್ನಾಥದಾಸರ ವಿಶೇಷ ರೀತಿಯ ಕೊಡುಗೆ. ತ್ರಿಪದಿಗಳನ್ನು ಆಧ್ಯಾತ್ಮಿಕ ತತ್ತ್ವ ನಿರೂಪಣೆಗೆ ಇಷ್ಟು ಸಮರ್ಥವಾಗಿ ಉಪಯೋಗಿಸಿಕೊಂಡಿರುವ ಮತ್ತೊಂದು ಉದಾಹರಣೆ ಸಮಗ್ರ ಕನ್ನಡ ಸಾಹಿತ್ಯದಲ್ಲೇ ಮತ್ತೊಂದಿಲ್ಲ. ತಮ್ಮ ಮನೆ ತಪ್ಪಿದ ಸೊಸೆಗೆ ಭಗವಚ್ಚಿಂತನೆಗೆ ಅನುಕೂಲಿಸುವಂತೆ ರಚಿತವಾದವೆಂದು ಪ್ರತೀತಿಯಿರುವ ಈ ಕೃತಿಯಲ್ಲಿ ಸಾವಿರಕ್ಕೂ ಮಿಕ್ಕ ತ್ರಿಪದಿಗಳಿದ್ದುವೆಂದು ಐತಿಹ್ಯವಿದ್ದರೂ ಇಂದು ದೊರೆತಿರುವುದು ನಾಲ್ಕು ನೂರ ಹದಿಮೂರು ಮಾತ್ರ. ಇದರಲ್ಲಿ ಮಂಗಳ ರೂಪವಾದ ಕೊನೆಯ ನುಡಿಗಳನ್ನು ಬಿಟ್ಟು ಉಳಿದವುಗಳೆಲ್ಲ ತ್ರಿಪದಿ ಛಂದಸ್ಸಿನಲ್ಲಿವೆ. ವಿನಾಯಕ ಸ್ತೋತ್ರ, ನವಗ್ರಹ ಸ್ತೋತ್ರ, ಅಗ್ನಿ, ರುದ್ರ, ವಾಯು, ಬ್ರಹ್ಮ, ತುಳಸೀವೃಂದಾವನ, ಭೂ ದುರ್ಗಾ, ದಶಾವತಾರ, ಶ್ರೀವೆಂಕಟೇಶ ಶ್ರೀನಿವಾಸ, ಶ್ರೀಕೃಷ್ಣ ಸ್ತೋತ್ರ ಎಂಬುದಾಗಿ ವಿಶೇಷವಾಗಿ ಸ್ತೋತ್ರ ರೂಪದಲ್ಲೇ ರಚಿತವಾಗಿರುವುದು ಈ ಕೃತಿಯ ಮತ್ತೊಂದು ವೈಶಿಷ್ಟ್ಯ. ತತ್ತ್ವಚಿಂತನೆ ಮಾಡುತ್ತಲೇ ಭಗವತ್ತ್ಸವನಕ್ಕೆ ಈ ಕೃತಿ ನೀಡುವ ನೆರವು ಅಪಾರ ಅಲ್ಲದೇ ರುಕ್ಮಿಣೀ ವಿಲಾಸ, ಮಾಯಾವಾದಖಂಡನ ಎಂಬ ಸ್ತೋತ್ರರೂಪಕ್ಕೆ ಸೇರಿದ ಎರಡುಭಾಗ ಇದರಲ್ಲಿ ಉಂಟು. ಭಗವಂತನ ಮಹಿಮೆಯನ್ನು ತುಂಬಾ ಸರಳ ಶೈಲಿಯಲ್ಲಿ, ತುಂಬಾ ರಮಣೀಯ ರೀತಿಯಲ್ಲಿ ಬಣ್ಣಿಸುವ ಇವೆಲ್ಲ ನಿಜಕ್ಕೂ ತತ್ತ್ವ ಸೂಕ್ತಗಳೇ ಆಗಿವೆ. ಇವು ವಿಶೇಷವಾಗಿ ಸ್ತ್ರೀಯರಿಗೆ ಮಾತ್ರವಲ್ಲದೆ ಇತರ ಎಲ್ಲ ಜಿಜ್ಞಾಸುಗಳಿಗೂ ತುಂಬಾ ಉಪಕಾರಕವಾಗಿವೆ

ಅನೇಕ ಶಾಸ್ತ್ರವಾಕ್ಯಗಳನ್ನು ಪರಿಣಾಮಕಾರಿಯಾಗುವ ಹಾಗೆ ಅನುವಾದಿಸಿಕೊಡುವ ಹರಿದಾಸ

(24 ನೇ ಪುಟ ನೋಡಿ)

## ಯುವವಾಣಿ

# ಯೋಗದ ಪರಿಚಯ

ಯೋಗ ಎನ್ನುವುದು ಅನಾದಿಯಾದದ್ದು. ಉಪನಿಷತ್ತು, ಪುರಾಣ, ಸ್ಮೃತಿ ಮತ್ತು ಪ್ರಾಚೀನ ಗ್ರಂಥಗಳಲ್ಲಿ ಇದರ ಉಲ್ಲೇಖಗಳಿವೆ. ಲೋಕಾನುಗ್ರಹಾರ್ಥವಾಗಿ ಮೊದಲು ಪರಮೇಶ್ವರನು ಪಾರ್ವತಿಗೆ ಯೋಗರಹಸ್ಯವನ್ನು ಬೋಧಿಸಿದನು. ಹಿರಣ್ಯಗರ್ಭನಾದ ನಂತರ, ಪತಂಜಲಿ ಮಹರ್ಷಿಗಳು ಇದರ ರಹಸ್ಯವನ್ನು ಅರಿತರು ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ವಿಶಿಷ್ಟ ರೀತಿಯಲ್ಲಿ ಯೋಗರಹಸ್ಯವನ್ನು ಉಪದೇಶಿಸಿದನು.

ಯೋಗ ಎಂಬುದರ ಅರ್ಥ ಏನೆಂದು ಮೊದಲು ತಿಳಿಯೋಣ. ಸಂಸ್ಕೃತದಲ್ಲಿ ಈ ಶಬ್ದಕ್ಕೆ ಅದೃಷ್ಟ ಎಂದು ಅನ್ನುತ್ತಾರೆ. ಇದೇ ಶಬ್ದಕ್ಕೆ ಮತ್ತೊಂದು ಪದವನ್ನು ಮೊದಲಿಗೆ ಸೇರಿಸಿದಾಗ, ಆ ಮೊದಲ ಶಬ್ದ ಅಥವಾ ಪದವನ್ನು ಅನುಸರಿಸಿ ಅದರ ಅರ್ಥವನ್ನು ಕೊಡುತ್ತದೆ. ಉದಾಹರಣೆಗೆ ರಾಜಯೋಗ; ಜ್ಞಾನಯೋಗ; ಭಕ್ತಿಯೋಗ; ಕರ್ಮಯೋಗ. ನಾವು ಆಡುವ ಮಾತಿನಲ್ಲಿ ಎಲ್ಲದಕ್ಕೂ ಯೋಗ ಇರಬೇಕು, ಅವನ ಯೋಗ ಅದು–ಎಂದು ಆಡುವುದು ರೂಢಿಯಲ್ಲಿದೆ. ಋಗ್ವೇದದಲ್ಲಿ ಸಾಧಾರಣವಾಗಿ ಸಾಧಿಸಲು ಆಗದೆ ಇರುವುದನ್ನು ಸಾಧಿಸುವುದೇ ಯೋಗ ಎಂದು ಅನಿಸಿಕೊಂಡಿದೆ. ಪಾಣಿನಿಯಲ್ಲಿ ಯೋಗಕ್ಕೆ ಏಕಾಗ್ರತೆ ಎಂದು ಹೇಳಿದೆ. ಒಟ್ಟಿನಲ್ಲಿ ಇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವುದೇ ಯೋಗ.

ಈ ಶರೀರವು ಪಂಚಭೂತಗಳಿಂದಾಗಿದೆ. ಬದುಕಿರುವವವರೆಗೆ ಅದನ್ನು ಆರೋಗ್ಯವಾಗಿಡಲು, ಶರೀರ, ಇಂದ್ರಿಯ ಮತ್ತು ಮನಸ್ಸು ಇವುಗಳನ್ನು ಹತೋಟಿಯಲ್ಲಿ ಇಟ್ಟುಕೊಂಡು ಪೂರ್ಣರೂಪದಲ್ಲಿ ಸ್ವಭಾವಿಕ ಶಕ್ತಿಗಳನ್ನು ಹೊಂದಿ ಆನಂದಿಸಲು ಯೋಗ ಒಂದು ಸಾಧನ ಆಗಿದೆ, ಒಂದು ಮಾರ್ಗವಾಗಿದೆ.

ಯೋಗಕ್ಕೆ ಜಾತಿ–ಮತ, ಕುಲಗೋತ್ರ ಸ್ತ್ರೀ – ಪುರುಷ ಎಂಬ ಭೇದವಿಲ್ಲ. ಯಾರು ಬೇಕಾದರೂ ಯೋಗಾಭ್ಯಾಸ ಮಾಡಿ ಅದರಿಂದ ದೇಹವನ್ನು ದೃಢವಾಗಿ ಗಟ್ಟಿಯಾಗಿಯೂ, ಮನಸ್ಸನ್ನು ಶಾಂತವಾಗಿ ಇರುವಂತೆಯೂ, ಇಂದ್ರಿಯಗಳನ್ನು ಹತೋಟಿಯಲ್ಲೂ ಇಟ್ಟುಕೊಳ್ಳಬಹುದು.

ಯೋಗವು ಅಷ್ಟಾಂಗ ಎಂದು ಪ್ರಸಿದ್ಧಿ ಹೊಂದಿದೆ.

ಯಮ: ದುಷ್ಟ ಪ್ರವೃತ್ತಿಗಳನ್ನು ತಡೆಯತಕ್ಕದ್ದು ಬಿಡತಕ್ಕದ್ದು. ಮತ್ತು ಅಹಿಂಸಾ ಸತ್ಯ, ಅಸ್ತೇಯ, ಬ್ರಹ್ಮಚರ್ಯದ ಪಾಲನೆ.

ನಿಯಮ: ಸಿದ್ಧಿಸಿಕೊಳ್ಳುವುದು, ಸರ್ವಮಂಗಳ ಬಯಸುವುದು.

ಆಸನ: ಶರೀರದ ಎಲ್ಲಾ ಅಂಗಗಳನ್ನೂ ಹತೋಟಿಯಲ್ಲಿಟ್ಟುಕೊಂಡು ಸುಖಕರವಾಗಿ ಆರೋಗ್ಯವಾಗಿ ಮನಶ್ಶಾಂತಿಯಿಂದ ಇರತಕ್ಕದ್ದು.

ಪ್ರಾಣಾಯಾಮ: ಉಸುರಿನ ಮೇಲೆ, ಪ್ರಾಣವಾಯುವಿನ ಮೇಲೆ ಹತೋಟಿಯನ್ನು ಇಟ್ಟುಕೊಳ್ಳುವುದು. ಈ ಕ್ರಮವನ್ನು ರೇಚಕ, ಪೂರಕ, ಕುಂಭಕಗಳಿಂದ ಮಾಡಬೇಕು.

ರೇಚಕ ಎಂದರೆ ಉಸಿರನ್ನು ಬಿಡುವುದು. ಪೂರಕ ಎಂದರೆ ಉಸಿರನ್ನು ಎಳೆದುಕೊಳ್ಳುವುದು. ಕುಂಭಕ ಹಾಗೆ ಎಳೆದುಕೊಂಡ ಉಸಿರನ್ನು ದೀರ್ಘಕಾಲ ತಡೆಹಿಡಿಯುವುದು.

ಇದರಿಂದ ಕಲ್ಮಷಗಳು ಹೋಗಿ ಮೆದುಳಿನ ಕ್ರಿಯೆ ಮತ್ತು ಹೃದಯಕ್ರಿಯೆ ಚುರುಕಾಗಿರುವುದು.

ಪ್ರತ್ಯಾಹಾರ: ಆಮೆಯು ತನ್ನ ಕೈಕಾಲುಗಳನ್ನು ಮೇಲಿನ ಚಿಪ್ಪಿನೊಳಗೆ ಮುಚ್ಚಿಟ್ಟುಕೊಳ್ಳುವಂತೆ, ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟು ಕೊಳ್ಳುವುದೇ ಪ್ರತ್ಯಾಹಾರ.

ಧಾರಣೆ: ನಾಭೀಚಕ್ರ, ಹೃದಯ, ಜಿಹ್ವಾಗ್ರ, ನಾಸಾಗ್ರ, ಶಿರಸ್ಸು ಇವುಗಳನ್ನು ಮತ್ತು ಚಿತ್ತವನ್ನೂ ಸ್ಥಿರವಾಗಿ ಸಿಲ್ಲಿಸತಕ್ಕದ್ದು. ಸ್ಥಿಮಿತ ಚಿತ್ತಧಾರಣ ಮಾಡುವುದು. ಪ್ರಯತ್ನಪೂರ್ವಕವಾಗಿ ವಿಷಯವನ್ನು ಹಿಡಿದು ನಿಲ್ಲಿಸುವುದು.

ಧ್ಯಾನ: ಚಿತ್ತ ಸ್ಥಿರೀಕರಣವೇ ಧ್ಯಾನ

ಸಮಾಧಿ: ಧ್ಯೇಯ ವಸ್ತು ಸ್ವರೂಪದಲ್ಲಿ ಲೀನವಾಗುವಿಕೆ. ಇದರಲ್ಲಿ ಯೋಗಿ ಅನೇಕ ಅಲೌಕಿಕ ಶಕ್ತಿಗಳನ್ನು ಪಡೆದಿರುತ್ತಾನೆ. ತಾನು ಇದ್ದ ಜಾಗದಿಂದಲೇ ಅತಿ ದೂರದ ವಸ್ತುವನ್ನು ಸ್ಪರ್ಶಿಸಬಲ್ಲ. ಎದುರಿಗೆ ಇದ್ದರೂ ಸಹ ಕಣ್ಣಿಗೆ ಕಾಣದಂತೆ ಅದೃಶ್ಯನಾಗಬಲ್ಲ. ಆ ಯೋಗಿಗೆ ತ್ರಿಕಾಲ ಜ್ಞಾನ ಇರಬಲ್ಲದು. ಅವನು ಇಚ್ಛಿಸಿದರೆ ತನ್ನ ದೇಹವನ್ನು ಆನೆಯಂತೆ ಭಾರ ಮಾಡಿಕೊಳ್ಳಬಲ್ಲ ಅಥವಾ ಹತ್ತಿಗಿಂತಲೂ ಹಗುರವನ್ನಾಗಿಯೂ ಮಾಡಿಕೊಳ್ಳಬಲ್ಲ. ಗಾಳಿಯಲ್ಲಿ ಹಾರಬಲ್ಲ. ನೀರಿನಲ್ಲಿ, ಅಗ್ನಿ ಕುಂಡದಲ್ಲಿ ನಡೆಯಬಲ್ಲ. ಜನ್ಮ ಜನ್ಮದ ತಿಳುವಳಿಕೆಯೂ ಈತನಿಗೆ ಇರಬಲ್ಲದು. ಅಷ್ಟೇ ಏಕೆ ಪರಕಾಯ ಪ್ರವೇಶವನ್ನು ಸಹ ಆತ ಮಾಡಬಲ್ಲ. ಇದಕ್ಕೆ ನಾವು ಜಗದ್ಗುರು ಶಂಕರಾಚಾರ್ಯರ ಉದಾಹರಣೆಯನ್ನೇ ಬೇಕಿದ್ದರೆ ತೆಗೆದು ಕೊಳ್ಳಬಹುದು.

ಒಮ್ಮೆ ಶಂಕರಾಚಾರ್ಯರಿಗೂ ಮತ್ತು ಮಂಡನಮಿಶ್ರರಿಗೂ ವಾದ ನಡೆಯಲಾರಂಭಿಸಿತು. ಈ ವಾದದ ತೀರ್ಪನ್ನು ಮಂಡನಮಿಶ್ರರ ಪತ್ನಿಯಾದ ಉಭಯ ಭಾರತೀ ದೇವಿಗೆ ಒಪ್ಪಿಸಲಾಯಿತು. ಈ ವಾದದಲ್ಲಿ

**ಶ್ರೀಮತಿ ಎ. ಪಂಕಜ**

# ಸಪ್ತಗಿರಿ

**ಬರಹಗಾರರಿಗೆ ಸೂಚನೆ:**

ಸಪ್ತಗಿರಿ ಕನ್ನಡ ಮಾಸಪತ್ರಿಕ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಮಂಡನಮಿಶ್ರರು ಸೋತಲ್ಲಿ ಗೃಹಸ್ಥಾಶ್ರಮವನ್ನು ತ್ಯಜಿಸಿ ಸನ್ಯಾಸವನ್ನು ಸ್ವೀಕರಿಸುವುದಾಗಿಯೂ, ಶಂಕರಾಚಾರ್ಯರು ಸೋತಲ್ಲಿ ಗೃಹಸ್ಥಾಶ್ರಮ ಪಾಲಿಸುವುದಾಗಿಯೂ ಪ್ರತಿಜ್ಞೆ ಮಾಡಿದರು.

ಉಭಯ ಭಾರತೀದೇವಿಗೆ ಮುಗಿಯುದ ಈ ವಾಗ್ವಾದಕ್ಕೆ ಸದಾ ಕಾದು ಕುಳಿತರೆ ತನ್ನ ಗೃಹಕೃತ್ಯ ತೊಂದರೆ ಆಗುತ್ತೆ ಎಂದು ಅನಿಸಿತು. ಆಕೆ ಶಂಕರಚಾರ್ಯರು ಹಾಗೂ ಮಂಡನ ಮಿಶ್ರರು ಇವರೀರ್ವರ ಕೊರಳಿಗೂ ಪುಷ್ಪಮಾಲೆಯನ್ನು ಹಾಕಿ, ಯಾರ ಕೊರಳ್ಳಿ ಈ ಮಾಲೆಯು ಮೊದಲು ಬಾಡುತ್ತದೆಯೋ ಅವರು ಸೋತಂತೆ ಎಂದು ಹೇಳಿ ತನ್ನ ಕೆಲಸಗಳಿಗೆ ಹೋದರು. ಮಂಡನ ಮಿಶ್ರರ ಕೊರಳ ಮಾಲೆ ಬಾಡಿದ್ದನ್ನು ಗಮನಿಸಿದ ಆಕೆ ತನ್ನ ಪತಿ ಸೋತರೆಂದು ಗ್ರಹಿಸಿದರು. ನಂತರ ತನ್ನೊಂದಿಗೂ ವಾದದಲ್ಲಿ ಗೆಲ್ಲಬೇಕು ಎಂದು ಹೇಳಿ ಶಂಕರಾಚಾರ್ಯರೊಂದಿಗೆ ವಾದಕ್ಕೆ ನಿಂತಳು.

ಶಂಕರಾಚಾರ್ಯರು ಬಾಲ್ಯದಲ್ಲೇ ಸನ್ಯಾಸ ಸ್ವೀಕರಿಸಿದ ನಿಷ್ಠಾವಂತ ವ್ಯಕ್ತಿ ಆದ್ದರಿಂದ ಕಾಮುಕಲೆಯಬಗ್ಗೆ ಅವರಿಗೆ ಪರಿಚಯ ಇರುವುದಿಲ್ಲ ಎಂದು ಅರಿತಿದ್ದ ಭಾರತೀ ದೇವಿಯು ಅದರ ಒಗ್ಗೆ ಪ್ರಶ್ನಿಸಿದಳು. ಕಾಮುನಲ್ಲಿರುವ ಕಲೆ ಎಷ್ಟು? ಇವುಗಳ ಸ್ವರೂಪ ಏನು? ಆದಿ.

ಈ ಪ್ರಶ್ನೆಗೆ ಉತ್ತರಿಸಲು ಕಾಲಾವಕಾಶ ಬೇಕೆಂದು ಒಂದು ತಿಂಗಳ ಅವಧಿ ಪಡೆದುಕೊಂಡ ಆಚಾರ್ಯರು. ಕಾಮುಕಲೆಯ ಅರಿವನ್ನು ಪಡೆಯಲೋಸುಗ ಏನಾದರೂ ಮಾಡಬೇಕೆಂದು ನಿಶ್ಚೈಸಿದರು. ತಾನು ಬೇರೆ ದೇಹದಲ್ಲಿದ್ದು ಅದರ ಅನುಭವಗಳನ್ನು ಪಡೆದರೆ, ತನ್ನ ಈ ದೇಹಕ್ಕೆ ಅದರ ಸೋಂಕು ಅಂಟುವುದಿಲ್ಲ ಎಂದು ತಿಳಿದ ಶಂಕರರು, ಕಾಡಿನಲ್ಲಿ ಬೇಟೆಯಾಡಲು ಬಂದು ಅಲ್ಲಿಯೇ ಹೃದಯಾಘಾತದಿಂದ ಸತ್ತುಬಿದ್ದ ಅಮರರ ರಾಜನ ದೇಹದಲ್ಲಿ ಪರಕಾಯಪ್ರವೇಶ ಮಾಡಿ ರಾಜನಾಗಿ ಎಲ್ಲಾ ಭೋಗವಿಲಾಸಗಳನ್ನು ಅನುಭವಿಸಿ ಸಂಪೂರ್ಣ ಕಾಮುಕಲೆಯ ಪರಿಚಯ ಮಾಡಿಕೊಂಡು, ನಂತರ ಮತ್ತೆ ತಮ್ಮ ದೇಹವನ್ನು ಪ್ರವೇಶಿಸಿದರು. ಅನಂತರ ಉಭಯ ಭಾರತಿಯಲ್ಲಿ ವಾಗ್ವಾದ ಮಾಡಿ ಆಕೆಯನ್ನು ವಾದದಲ್ಲಿ ಸೋಲಿಸಿದರು.

ಇಲ್ಲಿ ಈ ಒಂದು ಘಟನೆಯನ್ನು ಇಷ್ಟು ದೀರ್ಘವಾಗಿ ಹೇಳಲು ಕಾರಣ, ನಮ್ಮಲ್ಲಿ ಹಿಂದಿನಿಂದ ನಡೆದು ಬಂದ ಯೋಗಪುರುಷರು ಅನೇಕ ಸಿದ್ಧಿಗಳನ್ನು ಪಡೆದಿದ್ದರು. ಸಾಧಿಸಲು ಆಗದೆ ಇರುವಂತಹ ಕಠಿಣವಾದ ವಿಚಾರಗಳನ್ನು ಈ ಅಷ್ಟಾಂಗ ಯೋಗದ ಅಭ್ಯಾಸ ಬಲದಿಂದ ಸಾಧಿಸುವ ಶಕ್ತಿರಾಗಿದ್ದರು ಎಂದು ತೋರಿಸಲು.

ಈಗಲೂ ನೋಡಿ, ಬೀದಿಯಲ್ಲಿ ಗುಳಿತೆಗೆದು ಅದರಲ್ಲಿ ತಮ್ಮನ್ನು ಹೂಳಿಕೊಂಡು ಒಂದೆರಡು ದಿನಗಳು ಅಥವಾ ಇನ್ನು ಹೆಚ್ಚು ಕಾಲ ಸಮಾಧಿ ಅವಸ್ಥೆಯಲ್ಲಿರುವ ಜನವನ್ನು ನೋಡುತ್ತೇವೆ. ನಮ್ಮ ಕಣ್ಣಿಗೆ ಇಂದ್ರಜಾಲ ಎನ್ನುವರೀತಿಯಲ್ಲಿ ಎದುರಿಗೆ ಚಿತ್ರ ವಿಚಿತ್ರ ರೀತಿಯಲ್ಲಿ ನಡೆಯುವುದನ್ನು ಕಂಡಿದ್ದೇವೆ. ಇದು ಅದ್ಭುತ, ಪವಾಡ ಎಂದೂ ಅನಿಸಿದೆ. ಆದರೆ ಈ ಅದ್ಭುತ, ಪವಾಡಗಳನ್ನು ಮನುಷ್ಯ ಕ್ಷಣಿಕವಾದ ಆಸೆ ಅಪೇಕ್ಷೆಗಳಿಗೆ ಬಳಸಿಕೊಂಡು ದುರ್ಬಲನಾಗಿ ವ್ಯಥಿತನಾಗಬಾರದು.

ಅಷ್ಟಾಂಗಯೋಗವೆಂದು ಪ್ರಸಿದ್ಧಿ ಪಡೆದ ಈ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ, ಧ್ಯಾನ, ಸಮಾಧಿಗಳನ್ನು ಸತ್‌ರೀತಿಯಲ್ಲಿ ಬಳಸಿಕೊಂಡು, ತನ್ನ ಆರೋಗ್ಯವನ್ನು ವೃದ್ಧಿಮಾಡಿಕೊಳ್ಳಬಹುದು. ಇಹಪರಗಳೆರಡನ್ನು ಅರಿತು ಪುಣ್ಯಜೀವಿ ಆಗಿ ತಪೋಬಲದಿಂದ ಮೋಕ್ಷಸಾಧನೆ ಮಾಡಬಹುದು. ಪರಮಾತ್ಮ ತತ್ತ್ವಗಳ ಸಾಕ್ಷಾತ್ಕಾರ ಪಡೆಯಬಹುದು. ಯೋಗ, ನೈತಿಕ ಮತ್ತು ಧರ್ಮ ಜೀವನಕ್ಕೆ ದಾರಿಯಾಗುತ್ತದೆ. ಆಸನಗಳಿಂದ, ಪ್ರಾಣಾಯಾಮದಿಂದ ದೇಹ ಗಟ್ಟಿಯಾಗುತ್ತದೆ, ಸ್ಥೈರ್ಯ, ತಾಳ್ಮೆ ಮತ್ತು ಮನಶ್ಶಾಂತಿಗಳು ಲಭಿಸುತ್ತದೆ. ★

# ಕಾರಂಜಿ ಆಂಜನೇಯಸ್ವಾಮಿ



ಬೆಂಗಳೂರಿನ ಬಸವನಗುಡಿ ಬೃಹದಾಕಾರದ ಮೂರು ದೇವರುಗಳಿಗೆ ಪ್ರಸಿದ್ಧವಾಗಿದೆ ದೊಡ್ಡಬಸವಣ್ಣ ದೊಡ್ಡಗಣಪತಿ ಮತ್ತು ದೊಡ್ಡ ಆಂಜನೇಯ. ಈ ದೊಡ್ಡ ಆಂಜನೇಯ ಕಾರಂಜಿ ಆಂಜನೇಯಸ್ವಾಮಿ ಎಂದೂ ಪ್ರಸಿದ್ಧವಾಗಿದೆ.

ಗಿಡಮರಗಳ ನಡುವಿನ ಪ್ರಶಾಂತ ವಾತಾವರಣದ ಮಧ್ಯೆ ಈ ದೇವಾಲಯ ನಿಂತಿದೆ. ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆಯೇ ಎದುರಿಗೆ, ಉತ್ತರಾಭಿಮುಖವಾಗಿ ಎರಡೂ ಕೈಗಳನ್ನು ಅಂಜಲೀಬದ್ಧವಾಗಿ ಜೋಡಿಸಿ ದೀರ್ಘಬಾಲವು ಹಿಂಬದಿಯಲ್ಲಿ ಸುರುಳಿಯಾಗಿ ಸುತ್ತಿರಲು, ಕಾಲುಗಳನ್ನು ದೂರ ದೂರವಾಗಿ ನೆಟ್ಟು ಧೀರನಿಲುವಿನಲ್ಲಿ ವಿನಯ ನಮ್ರನಾಗಿ ನಿಂತಿರುವ ಆಂಜನೇಯ ಸ್ವಾಮಿಯ ದರ್ಶನವಾಗುತ್ತದೆ. ಹೆಬ್ಬಂಡೆಯೊಂದರ ಮೇಲೆ ಬಿಡಿಸಿರುವ ಈ ಉಬ್ಬು ತಗ್ಗಿನ ವಿಗ್ರಹದ ಧೀರನಿಲುವು ಸಾಗರೋಲ್ಲಂಘನಕ್ಕೆ ಸಿದ್ಧನಾಗಿ ನಿಂತ ಹನುಮಂತನನ್ನು ನೆನಪಿಸುತ್ತದೆ. ಈ ಬೃಹತ್ ವಿಗ್ರಹದ ಭವ್ಯನಿಲುವಿನೆದುರು ತನುಮನಗಳು ಭಕ್ತಿಭಾವದಿಂದ ತಾನಾಗಿ ಬಾಗುತ್ತವೆ.

ಈ ದೇವಸ್ಥಾನದ ಪೂರ್ವ ಇತಿಹಾಸ ರಾಮಾಯಣದ ಕಾಲಕ್ಕೆ ಸೇರುತ್ತದೆ. ಸೀತಾದೇವಿಗೆ ಮುದ್ರೆಯುಂಗರವಿತ್ತು, ಚೂಡಾಮಣಿಯೊಡನೆ ರಾಮಚಂದ್ರಸ್ವಾಮಿಯ ಬಳಿಗೆ ಮರಳುತ್ತಿದ್ದ ಆಂಜನೇಯ ಇಲ್ಲಿ ಕೆಲ ಕಾಲ ವಿಶ್ರಮಿಸಿಕೊಂಡನಂತೆ. ಪಾಂಡವರ ವಂಶಜಾತನಾದ ಜನಮೇಜಯರಾಯ ಭರತ ಖಂಡವನ್ನು ಸಂಚರಿಸುತ್ತಿದ್ದಾಗ, ದಂಡಕಾರಣ್ಯದ ಭಾಗವಾಗಿದ್ದ ಈ ಪ್ರದೇಶದಲ್ಲಿ ತಂಗಿದ್ದನಂತೆ. ಆಗ ಸ್ವಪ್ನ ಸೂಚಿತನಾಗಿ ಈ ವಿಗ್ರಹವನ್ನು ಇಲ್ಲಿ ಸ್ಥಾಪಿಸಿದನಂತೆ. ಕಾಲಗತಿಗೆ ಸಿಕ್ಕಿ ಮರೆಯಾಗಿದ್ದ ಈ ದೇವಸ್ಥಾನವನ್ನು ಪುನರ್ನಿರ್ಮಾಣ ಮಾಡಿದನು ಬೆಂಗಳೂರು ಕೆಂಪೇಗೌಡ. ಅವನು ಈ ದೇವರ ಮಹಾಭಕ್ತನಾಗಿದ್ದು ಗರ್ಭಗೃಹವನ್ನು ಕಟ್ಟಿಸಿದನು. ಸಮೀಪದಲ್ಲಿಯೇ ದೊಡ್ಡ ಕಾರಂಜಿಯಿದ್ದುದರಿಂದ ದೇವರಿಗೆ ಕಾರಂಜಿ ಆಂಜನೇಯಸ್ವಾಮಿಯೆಂದೇ ಹೆಸರಾಯಿತು. ಈಗ ಆ ಕಾರಂಜಿ ಇಲ್ಲ. ಮೈಸೂರಿನ ಮಹಾರಾಜರಾಗಿದ್ದ ಶ್ರೀ ಜಯಚಾಮರಾಜ ಒಡೆಯರೂ, ಅವರ ಪತ್ನಿಯೂ ದೇವದರ್ಶನಾರ್ಥವಾಗಿ ಇಲ್ಲಿಗೆ ಆಗಮಿಸಿದ್ದರು.

ಆಂಜನೇಯ ಗುಡಿಯ ಉತ್ತರಭಾಗದಲ್ಲಿ ಆ ಸೀತಾ ಲಕ್ಷ್ಮಣ ಸಮೇತನಾದ ಶ್ರೀರಾಮಚಂದ್ರಸ್ವಾಮಿಯ ದೇವಾಲಯವಿದೆ. ರಾಮನು ಕನಸಿನಲ್ಲಿ ಕಾಣಿಸಿಕೊಂಡು ಆಜ್ಞಾಪಿಸಲು ಮುತ್ತೋಜಿರಾವ್ ಸಿಂಧ್ಯ ಎನ್ನುವವರು ಈ ದೇವಸ್ಥಾನವನ್ನು ಕಟ್ಟಿಸಿದರು. ವಿಗ್ರಹಗಳು ಮಟ್ಟಸವಾದ ನಿಲುವಿನಲ್ಲಿ ಗಂಭೀರ ಸುಂದರವಾಗಿವೆ. ಪಕ್ಕದಲ್ಲಿಯೇ ಆಂಡಾಳ್‌ನ ಪುಟ್ಟ ವಿಗ್ರಹವಿದೆ. ಚಾಮರಾಜ ಪೇಟೆ ಮತ್ತು ಬಸವನಗುಡಿಯ ವರ್ತಕರು ಈ ದೇವಸ್ಥಾನದ ಮೂಲ ಮಂಟಪವನ್ನೂ ದೇವಸ್ಥಾನದ ಸುತ್ತಲ ಪ್ರಕಾರವನ್ನು ಕಟ್ಟಿಸಿದ್ದಾರೆ.

ಪಂಚಾಮೃತಾಭಿಷೇಕ ಮತ್ತು ಪೂಲಂಗಿ ಅಲಂಕಾರಗಳ ಸಮಯದಲ್ಲಿ ಈ ದೇವರುಗಳ ಪೂರ್ಣ ಸೌಂದರ್ಯ ಪ್ರಕಟಗೊಳ್ಳುತ್ತದೆ. ಧಾರೆಧಾರೆಯಾಗಿ ಸುರಿಯುವ ಹಾಲಿನ ಬಿಳಿಯ ಪರದೆಯ ಹಿಂದೆ, ಕಪ್ಪುಕಲ್ಲಿನ ವಿಗ್ರಹಗಳ ದೈವೀ ಸೌಂದರ್ಯ ಎತ್ತಿ ಕಾಣುತ್ತದೆ. ಶ್ರೀರಾಮ ನವಮಿಯ ಮಾರನೆಯ ದಿನದಂದು ಮತ್ತು ಕಡೆಯ ಶ್ರಾವಣ ಶನಿವಾರದಂದು ನಡೆಸುವ ಪೂಲಂಗಿ ಅಲಂಕಾರ ಮನಮೋಹಕವೂ ಭಕ್ತಿಜನಕವೂ ಆಗಿರುತ್ತದೆ

ರಾಮೋತ್ಸವ ಮತ್ತು ಬ್ರಹ್ಮೋತ್ಸವಗಳು ವಿಜೃಂಭಣೆಯಿಂದ ನಡೆಸಲ್ಪಡುತ್ತವೆ. ರಾಮೋತ್ಸವದ ಕಡೆಯದಿನ ಪುಷ್ಪಪಾಲಕಿಯಲ್ಲಿ ಶ್ರೀ ಸೀತಾರಾಮರ, ಶ್ರೀಕೃಷ್ಣ ಆಂಡಾಳರ ಉತ್ಸವ ಮೂರ್ತಿಗಳು ಮೆರವಣಿಗೆಯಲ್ಲಿ ಕೊಂಡೊಯ್ಯಲ್ಪಡುತ್ತವೆ. ಪ್ರತಿವರ್ಷವೂ ಪವಿತ್ರೋತ್ಸವ ಮತ್ತು ಲಕ್ಷಾರ್ಚನೆಗಳೂ ಸಹ ಆಗಮರೀತ್ಯ ನಡೆಸಲ್ಪಡುತ್ತವೆ.

ಭಕ್ತ ಜನರಿಗೆ ಮಹದಾನಂದವನ್ನು ಉಂಟುಮಾಡುತ್ತ, ಬೇಡಿದ ವರಗಳನ್ನು ಅನುಗ್ರಹಿಸುತ್ತ, ಶ್ರೀರಾಮಚಂದ್ರಸ್ವಾಮಿ ಮತ್ತು ಶ್ರೀ ಆಂಜನೇಯಸ್ವಾಮಿಯರು ಈ ದೇವಾಲಯದಲ್ಲಿ ನೆಲಸಿದ್ದಾರೆ.

> ಆಂಜನೇಯಮತಿಪಾಟಲಾನನಂ
> ಕಾಂಚನಾದ್ರಿ ಕಮನೀಯ ವಿಗ್ರಹಮ್ ।
> ಪಾರಿಜಾತ ತರುಮೂಲ ವಾಸಿನಂ
> ಭಾವಯಾಮಿ ಪವಮಾನ ನಂದನಮ್ ॥

**ಸುಮನ ಬದರೀನಾಥ್**

(20ನೇ ಪುಟದಿಂದ)

ಸಾಹಿತ್ಯದ ವೈಶಿಷ್ಟ್ಯ ಇದರಲ್ಲಿ ವ್ಯಾಪಕವಾಗಿಯೇ ಕಾಣಬರುತ್ತದೆ. ಉದಾಹರಣೆಗಾಗಿ ;

ಹೃದಿರೂಪಂ ಮುಖೇ ನಾಮ<br>
ನೈವೇದ್ಯಮುದರೇ ಹರೇಃ ।<br>
ಪಾದೋದಕಂ ನಿರ್ಮಾಲ್ಯಂ<br>
ಮಸ್ತಕೇ ಯಸ್ಯಸೋಽಚ್ಯುತಃ ॥

–ಕೃಷ್ಣಾಮೃತ ಮಹಾರ್ಣವ (ಶ್ಲೋ–7) –ಎಂಬುದರ ಅನುವಾದ ರೂಪವಾಗಿರುವ ಪದ್ಯವನ್ನು ಇಲ್ಲಿ ಗಮನಿಸಬಹುದು.

ಹೃದಯದಲಿ ತವರೂಪ<br>
ವದನದಲಿ ತವನಾಮ<br>
ಉದರದಲಿ ನೈವೇದ್ಯ<br>
ಶಿರದಲ್ಲಿ ನಿರ್ಮಾಲ್ಯ<br>
ಪದಜಲಗಳಿರಲು ಭಯವುಂಟೆ

ಶ್ರೀ ವೆಂಕಟೇಶ ಸ್ತೋತ್ರ–7

ಇಲ್ಲಿ ಮೂಲದಲ್ಲಿನ ಅಚ್ಯುತಃ ಎಂಬುವ ಪದಕ್ಕೆ ಭಯವುಂಟೆ ಎಂಬ ಅನುವಾದ ವ್ಯಾಖ್ಯಾನ ರೂಪವೂ ಆಗಿರುವುದನ್ನು ಗಮನಿಸಬಹುದು.

ಹರಿಕಥಾಮೃತಸಾರ ಜಗನ್ನಾಥ ದಾಸರ ಮೇರು ಕೃತಿಮಾತ್ರವಲ್ಲದೆ ಹರಿದಾಸಸಾಹಿತ್ಯದ ಅತ್ಯಂತ ವಿಸ್ತಾರವಾದ ಕೃತಿ ಎನ್ನಿಸಿರುವುದು. 32 ಸಂಧಿಗಳಲ್ಲಿ ಒಟ್ಟು 988 ಭಾಮಿನೀ ಷಟ್ಪದಿಗಳನ್ನು ಹೊಂದಿರುವ ಈ ಕೃತಿ ಇಡೀ ಆಧ್ಯಾತ್ಮಿಕ ಸಾಹಿತ್ಯದಲ್ಲಿಯೇ ಒಂದು ವಿಶಿಷ್ಟ ಕೃತಿ. ಪ್ರಸನ್ನ ಶೈಲಿ, ಸರಸ ಅಲಂಕಾರಗಳು, ಹೃದ್ಯನಿರೂಪಣೆ, ಇತ್ಯಾದಿ ಅನೇಕ ಕಾರಣಗಳಿಂದಾಗಿ ಅಮರ ಕೃತಿಗಳಲ್ಲೊಂದೆನಿಸುವ ಇದು ಒಂದರ್ಥದಲ್ಲಿ ಸಮಗ್ರ ಹರಿದಾಸಸಾಹಿತ್ಯವನ್ನೇ ಪ್ರತಿನಿಧಿಸುವ ಅಮೂಲ್ಯ ಕೃತಿ. ಹರಿದಾಸ ಸಾಹಿತ್ಯದ ವಿರಾಡ್ರೂಪವನ್ನು ಸಮರ್ಥವಾಗಿ ಬಿಂಬಿಸುವ 'ಆದರ್ಶ'ವೂ ಆಗಿದೆ. ಮಂಗಳಾಚರಣ, ಕರುಣಾ, ವ್ಯಾಪ್ತಿ, ಭೋಜನ ರಸ ವಿಭಾಗ ಮೊದಲಾಗಿ 32 ಸಂಧಿಗಳಲ್ಲಿ ಸಾಧಕರು ಅಪೇಕ್ಷಿಸುವ ಪ್ರಮೇಯ ರತ್ನಗಳೆಲ್ಲ ಕೌಶಲಪೂರ್ಣವಾಗಿ ಸಂಗ್ರಹೀತವಾಗಿವೆ. ಒಂದರ್ಥದಲ್ಲಿ ಇದು ದ್ವೈತ ಸಿದ್ಧಾಂತದ ಪ್ರಮೇಯ ರತ್ನ ಕೋಶ.

'ಶೋಕನದ ಪರಿಮಳವ ಷಟ್ಪದ ಸ್ವೀಕರಿಸುವಂದದಲಿ' ಹರಿದಾಸ ಸಾಹಿತ್ಯಕಮಲದ ಪ್ರಮೇಯ ಮಧುವನ್ನು ಸ್ವತಃ 'ಶಾಸ್ತ್ರ ಷಟ್ಪದ'ರಾಗಿ ಈ ಗ್ರಂಥರೂಪ ಸುವರ್ಣ ಪಾತ್ರದಲ್ಲಿ ಸಂಗ್ರಹಿಸಿಕೊಟ್ಟಿದ್ದಾರೆ. ಹರಿದಾಸ ಸಾಹಿತ್ಯದ ಎಲ್ಲ ಪ್ರಮೇಯಗಳೂ ಈ ಗ್ರಂಥದಲ್ಲಿ ಓತಪ್ರೋತವಾಗಿ ಗೋಚರಿಸುತ್ತವೆ.

'ಹರಿಕಥಾಮೃತಸಾರ' ಎಂಬ ಹೆಸರೇ ಇದು 'ನ್ಯಾಯಸುಧಾ'ಸಾರರೂಪ ಎಂಬ (ಪ್ರಮೇಯಗಳ ಬಗ್ಗೆ) ಅರ್ಥವನ್ನು ಧ್ವನಿಸುತ್ತದೆ. ಕೆಲವರು 'ಅಣುಸುಧಾ' ಎಂದು ಗೌರವದಿಂದ ಕರೆಯುವುದುಂಟು. ಶ್ರೀ ಟೀಕಾಚಾರ್ಯರು ಅನುವ್ಯಾಖ್ಯಾನ ನಳಿನದಲ್ಲಿ ಭ್ರಮರರಾಗಿ ವಿಹರಿಸಿ ನ್ಯಾಯಸುಧೆಯನ್ನು ರಚಿಸಿದಂತೆ ಜಗನ್ನಾಥ ದಾಸರು ಹರಿದಾಸಸಾಹಿತ್ಯ ನಳಿನವನದಲ್ಲಿ ಮಧುಕರರಾಗಿ ಈ ಕೃತಿಯನ್ನು ರಚಿಸಿದ್ದಾರೆ. ಈ ಅರ್ಥದಲ್ಲಿ ಪುರಂದರದಾಸರನ್ನು ಹರಿದಾಸ ಸಾಹಿತ್ಯದ ಸೂತ್ರಕಾರರೆಂದೂ ವಿಜಯದಾಸರನ್ನು ಭಾಷ್ಯಕಾರರೆಂದೂ ಜಗನ್ನಾಥ ದಾಸರನ್ನು ಟೀಕಾಕಾರರೆಂದೂ ವ್ಯವಹರಿಸಬಹುದು

'ಲೋಕವಾರ್ತೆಯಿದಲ್ಲ ಪರಲೋಕೈಕಸಾಧನ ವಾರ್ತೆ', 'ಮಳೆಯ ನೀರೋಣಿಯಲಿ ಪರಿಯಲು ಬಳಸರೂರೊಳಗಿದ್ದ ಜನರಾ ಜಲವು ಹೆದ್ದೊರೆಗೂಡೆ ಮಜ್ಜನ ಪಾನಗೈದಪರು' ಮೊದಲಾದ ಮಾತುಗಳಲ್ಲಿ ಹರಿಕಥಾಮೃತಸಾರದ ಹಿರಿಮೆಗೆ ಅವರು ಕೊಟ್ಟಿರುವ ಕಾರಣಗಳು ಹೃದಯಂಗಮವಾಗಿವೆ.

ಕೂಸೀಮಗ ದಾಸ ಎಂದು ವಿಜಯದಾಸರನ್ನು ನಿಂದಿಸುವ ಕಾರ್ಯಕ್ಕೆ ಕೈಹಾಕಿದ ಒಂದು ಚೇತನ ದಾಸೋಹಂ ಎಂದು ಹಾಡಿ ನಲಿಯಲಾರಂಭಿಸಿದ್ದು ವಿಜಯದಾಸರ ಹರಿದಾಸ ದೀಕ್ಷೆಯ ಹಿರಿಮೆಯ ದ್ಯೋತಕ. ಹರಿದಾಸಸಾಹಿತ್ಯಕ್ಕೆ ತಮ್ಮ ಹರಿಕಥಾಮೃತಸಾರ ಮೊದಲಾದ ಕೃತಿಗಳಿಂದ ಜಗನ್ನಾಥದಾಸರು ನೀಡಿರುವ ಕೊಡುಗೆ ಶ್ರೀ ಶ್ರೀದ ವಿಠಲರು ಹೇಳುವಂತೆ (ಫಲಶ್ರುತಿ ಸಂಧಿ) 'ಸಾತ್ವೀಕರಿಗೆ ಪರಮೋದಾರ ಮಾಡಿದ ಮರೆಯದುಪಕಾರ'. ಇಂತಹ ಜಗನ್ನಾಥ ದಾಸರನ್ನು ತಮ್ಮ ಕರುಣಾಮೃತದಿಂದ ಉಳಿಸಿದ ಗೋಪಾಲದಾಸರನ್ನು 'ಗೋಪಾಲದಾಸರಾಯ ನಿನ್ನಯ ಪಾದ ನಾ ಪೊಂದಿದೆನೊ ನಿಶ್ಚಯ, ಎಂದು ಅವರೇ ಸ್ತುತಿಸಿರುವುದು ಮನನೀಯ.

'ಕಂಸಮರ್ದನನ ದಾಸರಿಗೆ ನಿಸ್ಸಂಶಯದಿ ವಂದಿಸದೆ ನಾ ವಿದ್ವಾಂಸನೆಂದಹಂಕರಿಸೆ ಭವಗುಣಾದಿ ಬಂಧಿಸುವ ಹರಿಕಥಾಮೃತಸಾರ' ಎಂಬ ಜಗನ್ನಾಥದಾಸರ ಮಾತು ಒಂದರ್ಥದಲ್ಲಿ ಅವರ ಪೂರ್ವಜೀವನದ ವ್ಯಾಖ್ಯೆ. ಭಗವಂತನನ್ನು ಸದ್ಭಕ್ತಿಯಿಂದ ಕಂಡು ಭವಬಂಧನದ ಪರಿಹಾರ ಕಂಡುಕೊಂಡದ್ದು ಅವರ ಉತ್ತರ ಜೀವನದ ಸಾಧನೆ.

ಒಟ್ಟಿನಲ್ಲಿ ಜಗನ್ನಾಥದಾಸರ ರಚನೆಗಳು ಯೋಗ್ಯಚೇತನರ ದೃಷ್ಟಿಯನ್ನು ಭಗವಂತ ಕಡೆಗೆ ಸೆಳೆಯುವ ಮೂಲಕ ಜೀವನವನ್ನು ನಂದಾದೀಪವನ್ನಾಗಿಸುವ ರಚನೆಗಳು; ಎಂದೂ ಮರೆಯುವಂತಿಲ್ಲ.

(14 ನೇ ಪುಟದಿಂದ)

ಬಹು ದಿನದಿನವೆಲ್ಲಿರುವ ಪಲವುಸಿರ ಪೊರೆದವನೆ
ಕಡಲಣುಗಿಯೊಡನಿರುವ ನಿನ್ನಿನಿಯ ರೂಪವನು
ನಾ ಕಾಣದಿನ್ನೆನಿತು ಕಾಲವನು ಕಳೆವೆನಿಲ್ಲಿ ?

ಎಂದು ಮೊರೆಯಿಡುವಳು; ಆದರೂ ಪ್ರಿಯನು ಬರುವುದಿಲ್ಲ. ಪಕ್ಷಿಗಳು, ಮೇಘಗಳು ಮೊದಲಾದುವುಗಳ ಮೂಲಕ ನಾಯಕನಿಗೆ ಸಂದೇಶವನ್ನು ಕಳುಹಿಸುವಳು, ಆತನ ಸಂಬಂಧವಾದ ಎಲ್ಲ ವಸ್ತುವೂ ತನ್ನದೆನ್ನುವಳು. ಆದಾದರೂ ದೊರಕಲೆಂದು ಕೂಗುವಳು, ಅರಚುವಳು, ಅವಳ ಈ ವಿಚಿತ್ರಗತಿಯನ್ನೂ ಅರ್ಥಮಾಡಿಕೊಳ್ಳಲಾರದ ಇವಳ ನೆರೆಹೊರೆಯವರು, ಇವಳು ಹುಚ್ಚಿಯೆಂದು ಇವಳ ಸಂಗವನ್ನು ತ್ಯಜಿಸುವರು, ರಾತ್ರಿಯಾಗುವುದು. ಮನೆಯವರೆಲ್ಲ ನಿದ್ರೆಗೆಯ್ಯುವರು. ಇವಳಿಗೆ ಮಾತ್ರ ನಿದ್ರೆ ಹತ್ತದೆ ತನ್ನಷ್ಟಕ್ಕೆ ತಾನೆ–

ನಗರವೆಲ್ಲ ನಿದ್ರಿಸಿತ್ತು,
ಲೋಕವೆಲ್ಲ ಕತ್ತಲಾಯ್ತು
ಕಡಲ್ಗಳೆಲ್ಲ ಶಾಂತವಾಯ್ತು,
ರಾತ್ರಿಯಂತು ಮುಗಿಯದಾಯ್ತು
ಭೂಮಿಯನ್ನು ರಕ್ಷಿಸಿದಾ
ಶೇಷಶಾಯಿ ಬಾರದಿಹನೇ
ಇಂತಾಗೆ ಪಾಪಿಯೆನ್ನ
ಪ್ರಾಣವನ್ನು ಕಾವರಾರೊ ?

ಎಲೆ ಮನವೆ, ನೀನುಕೂಡ ಗೆಳೆಯನಲ್ಲೆ
ರಾತ್ರಿಯಂತು ಕಲ್ಪವಾಗಿ ಬೆಳೆಯುತಿಹುದೇ
ಎದೆಯಾಣ್ಮ ರಾಮಚಂದ್ರನಿನ್ನು ಬರನೆ
ಪಾಪಿವೆಣ್ಣ ಜನ್ಮವೆಂತು
ಕಡೆಯಹುದೋ ನಾನರಿಯೆ

ಎಂದು ತನ್ನ ಬಾಳನ್ನು ಹಳಿಯುವಳು ತನ್ನ ಜೀವನವು ನಿರರ್ಥಕವೆನ್ನುವಳು; ಹೇಗಾದರೂ ಮಾಡಿ ಅವನನ್ನು ಹುಡುಕಿಯೇ ತೀರಬೇಕೆಂದು ಹೊರಟು ಸಮುದ್ರದ ದಡದಲ್ಲಿಯೂ ಕಾಡುಮೇಡುಗಳಲ್ಲಿಯೂ ಗಿರಿನದಿಗಳಲ್ಲಿಯೂ ಸುಂದರವಾದ ಉಪವನಗಳಲ್ಲಿಯೂ ಅಲೆಯುವಳು. ಅಲ್ಲಿರುವ ದಟ್ಟವಾದ ಮರಗಳೂ ಎತ್ತರವಾದ ಪರ್ವತಗಳೂ ಗಂಭೀರವಾದ ನದಿಗಳೂ ಅವಳಿಗೆ ನಾಯಕನ ನೆನಪನ್ನೇ ತರುವುವು. ಅವಳ ವಿರಹವು ಮತ್ತಷ್ಟು ಹೆಚ್ಚುವುದು. ಆ ಸನ್ನಿವೇಶದಲ್ಲಿ ಅವಳಿಗೆ ಅವಳ ಸುತ್ತಲಿರುವ ಪ್ರಪಂಚವೆಲ್ಲ ಅವಳಂತೆಯೇ ವಿರಹತಾಪದಿಂದ ದುಃಖಿಸುವಂತೆ ಕಾಣುತ್ತವೆ. ಅವುಗಳನ್ನು ಹೀಗೆಂದು ಪ್ರಶ್ನಿಸುವಳು.

ಪೆರ್ದೆರೆಯ ಕಡಲಬಳಿ ಅಲೆಯುತಿಹ ಎಳೆವಕ್ಕಿ
ಜಗವೆಲ್ಲ ನಿದ್ರಿಸಲು ನೀಮಾತ್ರ ಎದ್ದಿರುವೆ
ಎನ್ನಂತೆ ನೀನು ಸಹ ಬೇನೆಯಿಂ ಬಳಲುತಿಹೆ
ಸಿರಿಯರಸನೆನ್ನಂತೆ ನಿನ್ನದೆಯನೊಯ್ದಿಹನೆ ?

ಸೆಳೆದೊಯ್ದ ಹೃದಯದಿಂ ಬಳಲುತಿಹ ಎಳೆವಕ್ಕಿ
ನೀಡಿರುಳೆಲ್ಲ ಹಾಸಗೆಯ
ಸೇರದೆಯೆ ದುಃಖಿಸುವೆ
ಅವನಿನಿಯ ಪಿರಿದಾಗಿ ಪಿಡಿದಿರುವ ಎನ್ನ ಪ್ರಾಣ
ಅವನ ಕರ್ಮ್ಮಲಿಗಾಗಿ ಹಾತೊರೆಯುತಿಹುದಾ?

ಮನದಾಸೆ ಭಗ್ನವಾದಂತೆ ನೀ ಹಗಲಿರುಳು
ಮಸಮರುಗಿ ಬಚ್ಚರದ
ಮರ್ನಯಯು ಅಳುತಲಿಹೆ
ತೆಂಕಣದ ಲಂಕೆಯನು ಉರಿಗಿಟ್ಟವನ ನಾ
ಅಡಿಯಾಳ್ದ ಎನ್ನಂತೆ ನೀನಹೆಯೊ? ಚಿರಬಾಳು

ನೀರು ನೆಲಗಳಮೇಲೆ ಎಲ್ಲೆಲ್ಲು ಅಲೆದಲೆವ
ಇನಿತು ನಿದ್ರಿಸದಿರುವೆ, ಭಾರತದಿ ಕೈದುಳಿದ
ಚಕ್ರವನೆ ಪಿಡಿದವನ ಕಾಣಲೋಸುಗವಾ
ಎನ್ನಂತೆ ತೊಳಲುವೆಯ ತಂಗಾಳಿ, ಚಿರಬಾಳು

ಕಲ್ಪಕಲ್ಪಗಳಲ್ಲಿ ನೀರುಂಡು ಜಗಕೆಲ್ಲ
ಪೆರ್ಮಳೆಯ ಸುರಿಸುತಿಹ
ಕಾರ್ಮುಗಿಲೆ, ಎನ್ನಂತೆ
ಎನ್ನಗೆಳತಿಯರಂತೆ ನೀನು ಸಹ ಮಾಧವನ
ಪಾಶದಿಂ ಸೆಳೆಪಟು ನವೆಯುವೆಯ ?
ಚಿರಬಾಳು

ಇದರಿಂದ ಇವಳಿಗೆ ಯಾವವಿಧವಾದ ಸಮಾಧಾನವೂ ಉಂಟಾಗುವುದಿಲ್ಲ. ಹಾಗೆಯೇ ಪ್ರಿಯನನ್ನು ಹುಡುಕುತ್ತ ಮುಂದೆ ಹೋದ ಹಾಗೆಲ್ಲ ಇವಳಿಗೆ ಸಮಾಧಾನವುಂಟಾಗುವ ಬದಲು ಪ್ರಕೃತಿಯಲ್ಲಿ ಸ್ವತಂತ್ರನಾಗಿ ಅಲೆದಾಡುತ್ತ ಇನಿಯನೊಡನೆ ಸರಸಸಲ್ಲಾಪಗಳನ್ನು ಮಾಡುವ ಪಕ್ಷಿ ಮೃಗಗಳು ಇವಳ ವಿಶ್ಲೇಷವನ್ನು ನೋಡಿ ಅಣಕಿಸುವಂತೆ ತೋರುವುದು. ಆಗ ಅವುಗಳನ್ನು ಸಂಬೋಧಿಸಿ–

ಪ್ರಿಯೆಯೊಡನೆ ಒಲ್ಲಿಗೆಯ್ದು
ಡುತಿಹ ಕೋಗಿಲೆಯೆ!
ಬೇಟದುತ್ಸವದಿಂದ ತೆಗೆಯುತಿಹೆಯೆನ್ನುಸಿರ
ಎನ್ನಿನಿಯ ರಮಣನು ತಂದೀಯಲಾರದೆಯೆ
ಏಕಿಂತು ಅಣಕಿಸುತೆ ಕೊಲುವಿರೆನ್ನ

ಹಂಸದಂಪತಿಗಳಿರ, ನಾನಿಷ್ಟ ಬೇಡುವೆನು
ಮುಂದರಿಯದೇಕೆಷ್ಟುನಲಿಯುವಿರಿ, ಬೇಡವಿದು
ಗೋಪಾಲನೊರ್ವನಿಗು
ಶಾಶ್ವತದ ದಯೆತೋರನ್
ಕಾಣದೇ ಎನ್ನುಸಿರು ಅವನ ಕಮ್ಮಿಳ್ಳಿಹುದ ?

-ಎಂದು ಹೇಳಿ ತನ್ನನ್ನು ಉದ್ರೇಕಿಸದಂತೆ ಪ್ರಾರ್ಥಿಸಿಕೊಳ್ಳುವಳು. ಎಷ್ಟು ಕಾದರೂ ನಾಯಕನು ಬಾರದಿರಲು ಇವಳಿಗೆ ಸಹಿಸಲಸದಳವಾಗಿ ಪ್ರಾಣತ್ಯಾಗಮಾಡುವ ಸಂಭವವೊದಗುವುದು. ಇದನ್ನು ಪ್ರಿಯನು ತಾನೆ ಹೇಗೆ ಸಹಿಸುವನು ? ಇನ್ನೂ ತಡೆದರೆ ಅನರ್ಥವಾಗಬಹುದೆಂದು ನಾಯಕನು ತಾನೇ ನಾಯಕಿಯಲ್ಲಿಗೆ ಬರುವನು. ಈಗ ಅವಳಿಗೆ ಅವನ ಸಾಮೀಪ್ಯದಿಂದ ಶಾಂತಿಯುಂಟಾಗುವ ಬದಲು ಅವನ ನಿಷ್ಠುರ ಕಠಿಣತೆಗಾಗಿ ಅವನಲ್ಲಿ ಕೋಪ ಬಂದು ಮುಂದಿನ ಪದ್ಯಗಳಲ್ಲಿ ಅವನನ್ನು ನಿಷೇಧಿಸುವಳು.

ನೀನೊಲಿದ ಪಿಡಿದಡವಿ
ನಡೆತರುವ ಮುಂದುಗಡೆ
ನಿನ್ನ ತೀವಿನೆಯಿದನು ಕೇಳಲಾಜನೆ ನಾನು
ರಕ್ಕಸನ ಪುರವಿದ ಎನ್ನ ಕ್ಷತ್ರಿಯನಂತೆ
ಚೆಂಡು ಗೆಜ್ಜೆಗಳನಿತ್ತು ಪೋಗು ನಡೆಯೆನ್ನಿಂದ

ನಿನ್ನಿನಿಯ ರೂಪವನು ನೋಡಿ
ಕುಣಿಯುವ ಭಾಗ್ಯ
ಎನಗಿಲ್ಲ; ಗರಿಕೆದರ್ದ ನವಿಲನನುಕರಿಸುತಿಹ
ಮಡದಿಯರ ಪಾಲಾಯ್ತು,
ಅದನಾಡಿದು ಫಲವೇನು ?
ಇನಿಗೊಳಲನೂದುತ್ತ ಪಶುಗಳನು ಕಾಯಿ ನಡೆ

ಪೆರ್ಗಡಲ ನೆರೆಕಡೆದ ಎನ್ನನಿಯ! ಮಾಯಾವಿ
ನಿನ್ನ ಈ ವಂಚನೆಯ ತಿಳಿಯದರಿಗರುಹು ನಡೆ
ಚೆಂಬಾಯಿ ಮಲರ್ಗಣ್ಣು
ಮೃತ್ಯುವಾಗಿಹುದಿಂದು
ನಿಡುದೋಳಮಡದಿಯರು
ನಿನ್ನಡರ್ದರಾರುಂಟು ?

ಆದರೆ ನಾಯಕನು ತನ್ನ ತಪ್ಪನ್ನೊಪ್ಪಿಕೊಂಡು ನಾಯಕಿಯನ್ನು ಸಮಾಧಾನಪಡಿಸುವನು. ಈಗ ನಾಯಕಿಯ ಮನಸ್ಸಿನಲ್ಲಿ ಒಂದು ವಿಚಿತ್ರ ಪರಿವರ್ತನೆಯುಂಟಾಗುವುದು. ತನ್ನ ಇಷ್ಟಾರ್ಥ ಸಿದ್ಧಿಯಾಗುವ ಬದಲು ಅವಳಿಗೆ ಸುಖದುಃಖಗಳೆರಡರ ಮಿಶ್ರಾನುಭವವುಂಟಾಗುವುದು. ಅವನನ್ನು ನಿಷ್ಕಾರಣವಾಗಿ ಜರೆದ ತನ್ನ ಸ್ವಭಾವವನ್ನು ಅವ್ಯಾಜಕೃಪಾಮಯನಾದ ಅವನ ನಡತೆಯನ್ನು ಹೋಲಿಸಿಕೊಂಡು ತಾನು ಸರ್ವಥಾ ಅವನ ಕೃಪೆಗೆ ಅನರ್ಹಳೆಂಬ ಭಾವನೆಯು ಅವಳಿಗೆ ತೋರಿ ಅವನ ಸಮಾಗಮ ಮಾಡುವುದು ಮಹಾಪಾತಕವೆಂದು ಭಾವಿಸಿ ಅವನನ್ನು ಬಿಟ್ಟು ಓಡಿಹೋಗುವಳು. ಆದರೆ ಕೃಪಾಸಮುದ್ರದ ದೇವನಾಯಕನು ಇವಳು ಎಷ್ಟು ಓಡಿದರೂ ಬಿಡದೆ ಬೆನ್ನಟ್ಟಿಕೊಂಡುಹೋಗಿ ಇವಳನ್ನು ಸೋಲಿಸುವನು. ಮಾನವಶಕ್ತಿಯ ಮಿತಿಯು ಮೀರುವುದು. ಶರಣಾಗತಿಯಲ್ಲದೆ ಬೇರೆ ಗತಿಯಿಲ್ಲ. ನಿನ್ನ ಇಚ್ಛೆ ನೆರವೇರಲಿ ಎಂಬುದೇ ಮುಂದಿನ ಪಲ್ಲವಿ. ಭಗವಂತನ ಕರಸ್ಪರ್ಶದಿಂದ ತಕ್ಷಣ ಬ್ರಹ್ಮಾನಂದಪ್ರಾಪ್ತಿಯೂ ಈಶ್ವರಸಾಕ್ಷಾತ್ಕಾರವೂ ಏಕಕಾಲದಲ್ಲಿ ಉಂಟಾಗುವುದು. ನಾಯಕಿಯು ಕಣ್ತೆರೆದು ಮುಂದಿರುವ ಚಿರಕಾಂಕ್ಷಿತನಾದ ದಿವ್ಯ ಮಂಗಳ ಸ್ವರೂಪಿಯನ್ನು ನೋಡಿ ಹಿಗ್ಗಿ ಲಕ್ಷ್ಮೀ ಸಮೇತವಾದ ವೈಕುಂಠಕ್ಕೆ ಹೊರಡುವಳು. ಅವರ

ಗಾದ ಸುಸ್ವಾಗತವನ್ನು ಮುಂದಿನ ಪದ್ಯಗಳಲ್ಲಿ **ನೋಡಿ:**

ಬಾನೆಲ್ಲ ಹರಡಿರುವ ಸಿರಿಮುಗಿಲು ಘೋಷಿಸಿತು
ಅಲೆಗಡಲು ಸುಭ್ರಮದಿ ಕೈಯೆತ್ತಿ ನರ್ತಿಸಿತು
ಏಳು ಲೋಕಂಗಳುತೆ ಬೆಳಗಿದುವು; ಎನ್ನೊಡೆಯು
ನಾರಣನ ಸೇವಕರ ತಾವ್ ಕಂಡು ಸಂತಸದಿ

ನಾರಣನ ತೊತ್ತುಗಳ ಕಂಡು ಸಂತಸದಿಂದ
ಪೊಂಗೊಡವ ತುಂಬಿದವು ಬೆಳ್ಮುಗಿಲು ಅಗಸದಿ
ನೀರ್ಗಡಲು ಮೇಲಿದ್ದು ಆದುದುವು ಪರ್ಬೆಟ್ಟ
ದಾರಿಯುದ್ದಕು ನಿಂತು ತೋರಣವ ಕಟ್ಟಿದುವು

ವಟುವಾದ ವಾಮನನ ಭಕ್ತಗಣಗಳ ಮುದದಿ
ಜಗವೆಲ್ಲ ಪುಷ್ಪಧೂಪಗಳಿಂದ ಪೂಜಿಸಿತು
ತಪಸಿಗಳು ಮೌನಮುದ್ರೆ
ಯನೊಡೆದು ಸ್ವರ್ಗಕಿದು
ನಲ್ವಟ್ಟೆ ದಯಮಾಡಿ
ಎಂದೆನುತ ಮುನ್ನಡೆದರ್

ಕಂಪಿಡಿದ ತುಳಸಿಯನು ಮುಡಿದಿರುವ
ಮಾಧವನ
ಭಕ್ತರಿಗೆ ಬಾನವರು ಬೀಡುಗಳ ಬಿಡಿಸಿದರು
ಬೆಂಗದಿರರ್ ಮುನ್ನುಗ್ಗಿ ಹಸ್ತಲಾಘವವಿತ್ತರ್
ಮುರಜಗಳು ದನಿಗೆಯ್ದು ವಲೆಗಡಲ ಪೋಲ್ತು

ಮಾಧವನ ತಮರಿಂದು ಬರ್ಪರೊಳು
ಬಾನವರು
'ದಯಮಾಡಿ ಎಮ್ಮೆಡೆಯು
ನಿ ಮ್ಸೇರಿ' ಎನ್ನುವರು
ಗರುಡ ಕಿನ್ನರರೆಲ್ಲ ಗೀತಗಳ ಪಾಡಿದರು
ವೇದಪಾಠಕರೆಲ್ಲ ಸಂತಸದಿ ಪಯನಿತ್ತರ್

ಇಂತಹ ಸುಸ್ವಾಗತವನ್ನು ಪಡೆದ ನಾಯಕಿಯು ಸ್ವಾ ಸಂಪನ್ನರಾದ ಆಳ್ವಾರ್ರವರು ವೈಕುಂಠವನ್ನು ಪ್ರವೇಶಿಸಿ ಪರಂಪರನ ನಿತ್ಯಕೈಂಕರ್ಯ ರೂಪವಾದ ಮೋಕ್ಷವನ್ನು ಪಡೆದು ಭಗವಂತನು ತಮಗೆ ಮೋಕ್ಷವನ್ನುಂಟುಮಾಡಿದ ರೀತಿಯನ್ನು ಮುಂದಿನ ಪದ್ಯದಲ್ಲಿ ತಿಳಿಸಿದ್ದಾರೆ

ಎನ್ನ ದೇವನೆನ್ನನೊಲಿದು
ಉಯಿರುಮೊಡಲುತಾನೆ ಆಗಿ
ನಾನು ನನ್ನದವನೆ ಆಗಿ
ತನ್ನ ತಾನೆ ತುತಿಸಿಯೆನ್ನ
ಜೇನು ಹಾಲು ಅಮರ್ದು ಕಬ್ಬು
ಎಲ್ಲ ವಸ್ತು ತಾನೆ ಆಗಿ
ಎನ್ನ ಸೆಳೆದು ತನ್ನೊಳಿರಿಸಿ
ತಾನೆ ತನ್ನ ಸೇವೆಯಾಳ್ದನು.

ಇಲ್ಲಿಗೆ 'ತಿರುವಾಯ್‌ಮೊಳಿ' ಮುಗಿಯುವುದು. ಇದುವರೆಗಿನ ಒಂದು ಸ್ಥೂಲಪರಿಚಯದಿಂದ ಆಳ್ವಾರ್ರವರ ಭಕ್ತಿಮಾರ್ಗ ವಿಶದವಾಗಿ ಅರ್ಥವಾಗಿರಬಹುದು. ಕಾಲ ದೇಶ ವರ್ತಮಾನಗಳಿಂದ ಯಾವ ಮೇಲ್ಮೆ ಕೀಳ್ಮೆಗಳಿಗೂ ಎಡೆಯಾಗದ ಪ್ರಪಂಚದ ಭಕ್ತಿರಸಪ್ರಧಾನವಾದ ಗ್ರಂಥಗಳಲ್ಲಿ ಒಂದು ಉತ್ತಮಸ್ಥಾನವನ್ನು ಪಡೆದಿದೆ.

ನಮ್ಮಾಳ್ವಾರ್ರವರ 'ತನಿಯನ್'ನಲ್ಲಿ ತಿರುವಾಯ್‌ಮೊಳಿಯು ಹೀಗೆಂದು ಸ್ತುತಿಸಲ್ಪಟ್ಟಿದೆ.

ಭಕ್ತಾಮೃತಂ, ವಿಶ್ವಜನಾನುಮೋದನಂ, ಸರ್ವಾರ್ಥದಂ ಶ್ರೀ ಶಠಗೋಪವಾಙ್ಮಯಂ, ಸಹಸ್ರಶಾಖೋಪನಿಷತ್ಸಮಂಗಮಂ ನಮಾಮ್ಯಹಂ ದ್ರಾವಿಡ ವೇದಸಾಗರಂ.

ಸರ್ವತಂತ್ರ ಸ್ವತಂತ್ರರೂ ಉಭಯವೇದಾಂತ ಪ್ರವರ್ತಕರೂ ಆದ ವೇದಾಂತದೇಶಿಕರವರು ತಿರುವಾಯ್‌ಮೊಳಿಯ ಮೇಲ್ಮೆಯನ್ನು ತಮ್ಮ 'ದ್ರಮಿಡೋಪನಿಷತ್ತಾತ್ಪರ್ಯರತ್ನಾವಳಿ' ಯಲ್ಲಿ ಹೀಗೆಂದು ಕೊಂಡಾಡಿದ್ದಾರೆ –

ಸಾರಸ್ಸಾರಸ್ವತಾನಾಂ ಶಠರಿಪುಫಣಿತಿಃ
ಶಾಂತಶುದ್ಧಾಂತಸೀಮಾ
ಮಾಯಾ ಮಾಯಾಮಿನೀಭಿಃ ಸ್ವಗುಣ
ವಿತತಿಭಿಃ ಬಂಧಯಂತೀಂ ಧಯಂತೀಮ್
ಪಾರಂಪಾರಂಪರೀತಃ ಭವಜಲಧಿ
ಭವನ್ಮಜ್ಜನಾನಾಂ ಜನಾನಾಂ
ಪ್ರತ್ಯಕ್ಪ್ರತ್ಯಕ್ಷಯೇನ್ನಃ ಪ್ರತಿನಿಯತ
ರಮಾಸನ್ನಿಧಾನಂ ನಿಧಾನಮ್

ಭಾಷಾಗೀತಿಃ ಪ್ರಶಸ್ತಾ ಭಗವತಿ ವಚನಾತ್
ರಾಜವಚ್ಚೋಪಚಾರಾತ್
ಸಾ ಚಾಗಸ್ತ್ಯ ಪ್ರಸೂತಾತ್ವಿತಿ ಪರಿಜಗೃಹೇ
ಭೂಮಿಕಾಭೇದಾ ಭೋಗ್ಯಾ
ಯತ್ತತ್ತ್ಯೃಂ ಶ್ರುತೀನಾಂ ಮುನಿಗಣ ವಿಹಿತೈಃ
ನ್ಯೇತಿ ಹಾಸೈಃಪುರಾಣೈಃ
ತತ್ರಾಸೌ ಸತ್ವಸೀಮ್ನಃ ಶಠಮಥನಮುನೇಃ
ಸಂಹಿತಾ ಸಾರ್ವಭೌಮೀ ॥

ಇತ್ಥಂ ಸೇವ್ಯಂ ಸುಭೋಗ್ಯಂ ಶುಭ
ಸುಭಗತನುಂ ಸರ್ವಭೋಗ್ಯೋಪಕೃಷ್ಟಂ
ಶ್ರೇಯಸ್ತದ್ಧೇತು ಭೂತು ಪ್ರಪದನ ಸುಲಭಂ
ಸ್ವಾಶ್ರಿತಾನಿಷ್ಟಜಿಷ್ಣುಂ
ಭಕ್ತಿಚ್ಛಂದಾನುರಕ್ತಂ ನಿರುಪಧಿಸುಹೃದಂ
ಸತ್ಪದವ್ಯಾಂ ಸಹಾಯಂ
ಶ್ರೀಶಂ ಪ್ರಾಹಸ್ಸಸಿದ್ಧೇ ಸ್ವಯಮಿಹ ಶರಣಂ
ಸ್ವಪ್ರಬಂಧೇ ಶಠಾರಿಃ ॥

**ಕಿಶೋರಜಗತ್**

# ಶ್ರವಣಕುಮಾರ

'ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ'–ಎಂದು ವೇದಗಳು ಸಾರುತ್ತವೆ. ಬಾಲಕ ಶ್ರವಣನು ಈ ವೇದ ವಾಕ್ಯವನ್ನು ಪರಿಪಾಲಿಸುವವನಾಗಿದ್ದನು. ಅವನು ತಂದೆ ತಾಯಿಯರು ದೇವರಿಗೆ ಸಮಾನವೆಂದುತಿಳಿದು ಅವರ ಸೇವೆಯನ್ನು ಸದಾಕಾಲವೂ ತಪ್ಪದೆ ಮಾಡುತ್ತಿದ್ದನು. ತಂದೆ ತಾಯಿಯರು, ಮುದುಕರೂ, ಕುರುಡರೂ ಆಗಿದ್ದರು. ಬಾಲಕ ಶ್ರವಣನ ಸೇವೆಯಿಂದ ಅವರು ಸಂತೋಷಪಡುತ್ತಿದ್ದರು.

ಒಂದು ಸಲ ಶ್ರವಣನ ತಂದೆ ತಾಯಿಗಳಿಗೆ ಕಾಶಿ, ಹರಿದ್ವಾರ, ಬದರಿನಾಥ ಮುಂತಾದ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಬೇಕೆಂದು ಆಸೆಯಾಯಿತು. ಇಬ್ಬರೂ ತಮ್ಮ ಬಯಕೆಯನ್ನು ಬಾಲಕ ಶ್ರವಣನಿಗೆ ಹೇಳಿದರು. ಶ್ರವಣನು ತೀರ್ಥಯಾತ್ರೆಗೆ ಹೊರಡಲು ಸಿದ್ಧನಾದನು. ಆದರೆ ಅವನು ಬಡವನಾಗಿದ್ದುದರಿಂದ ದೂರದ ಯಾತ್ರೆಗಳನ್ನು ಪೂರೈಸಲು ಶಕ್ತನಾಗಿರಲಿಲ್ಲ. ಅವನ ತಂದೆ, ತಾಯಿಯರು ಮುದುಕರೂ, ಕುರುಡರೂ ಆಗಿದ್ದುದರಿಂದ ಕಾಲ್ನಡಿಗೆಯಲ್ಲಿ ಹೋಗಲು ಸಾಧ್ಯವಿರಲಿಲ್ಲ. ಇದಕ್ಕಾಗಿ ಶ್ರವಣನು ಒಂದು ಕಾವಡಿಯನ್ನು ಮಾಡಿದನು. ಶ್ರವಣನು ತಂದೆ ತಾಯಿಯರನ್ನು ಕಾವಡಿಯಲ್ಲಿ ಕುಳ್ಳಿರಿಸಿ ತೀರ್ಥಯಾತ್ರೆ ಹೊರಟನು.

ತೀರ್ಥಯಾತ್ರೆ ಮಾಡುವಂತಹ ದಾರಿಯು ಕಾಡಿನೊಳಗೆ ಹೋಗುತ್ತಿತ್ತು. ದಟ್ಟವಾದ ಅರಣ್ಯಗಳನ್ನು ದಾಟುವಾಗ ಸಂಜೆಯಾದುದರಿಂದ ಅರಣ್ಯದಲ್ಲಿ ಒಂದು ಮರದ ಕೆಳಗೆ ವಿಶ್ರಮಿಸಿದರು. ಮಧ್ಯರಾತ್ರಿಯ ಹೊತ್ತಿಗೆ ಅವನ ತಂದೆ ತಾಯಿಯರಿಗೆ ಬಾಯಾರಿಕೆಯಾಯಿತು. ಇದಕ್ಕಾಗಿ ಅವರು ಕುಡಿಯಲು ನೀರನ್ನು ಕೇಳಿದರು. ಶ್ರವಣನು ನೀರನ್ನು ಹುಡುಕುತ್ತಾ ತುಸು ದೂರ ಹೋಗುವಷ್ಟರಲ್ಲಿ ಒಂದು ಸರೋವರ ಕಾಣಿಸಿತು. ಶ್ರವಣನು ಸರೋವರದಿಂದ ನೀರನ್ನು ತರಲು ಹೋದನು. ನೀರಿನೊಳಗೆ ಪಾತ್ರೆಯನ್ನು ಮುಳುಗಿಸಿದ. ನೀರು ಪಾತ್ರೆಯನ್ನು ತುಂಬುತ್ತಿದ್ದಂತೆ ಗುಳುಗುಳು ಸದ್ದಾಯಿತು. ಆ ಶಬ್ದವು ಬೇಟೆಗೆಂದು ಹೋಗಿದ್ದ ದಶರಥನ ಕಿವಿಗೆ ಬಿತ್ತು. (ದಶರಥ ಕೋಸಲ ಮಹಾರಾಜ. ಅವನಿಗೆ ಮೂವರು ಪತ್ನಿಯರು. ಅವರಲ್ಲಿ ರಾಮ,ಲಕ್ಷ್ಮಣ ಭರತ ಶತ್ರುಘ್ನರು ಹುಟ್ಟಿದರು.) ಅವನು ಶಬ್ದವೇಧಿ ವಿದ್ಯೆಯನ್ನು ಕಲಿತವನಾಗಿದ್ದನು. ಶಬ್ದವೇಧಿಯೆಂದರೆ ಗುರಿಯನ್ನು ಕಣ್ಣಿನಿಂದ ನೋಡದೆ ಅವರ ಸದ್ದುಕೇಳಿ ಬಾಣವನ್ನು ಹಾಕುವುದು. ಅವನು ಯಾವುದೋ ಪ್ರಾಣಿ ನೀರು ಕುಡಿ



ಶ್ರವಣಕುಮಾರನ ಜೀವನವನ್ನು ರೂಪಿಸುವ ಚಿತ್ರ

**ಶ್ರೀಮತಿ ಜಯಶ್ರೀ ಜಿ. ಭಟ್**

ಬಾಲು ಬಂದಿದೆಯೆಂದು ಭಾವಿಸಿ ಶಬ್ದ ಕೇಳಿಬಂದ ಕಡೆಗೆ ಬಾಣವನ್ನು ಬಿಟ್ಟನು. ಆ ಬಾಣವು ಶ್ರವಣನಿಗೆ ತಗುಲಿತು, ಅವನು ದಯನೀಯ ಧ್ವನಿಯಿಂದ ಮೊರೆಯಿಡುತ್ತಿರುವಾಗ ತನ್ನ ತಪ್ಪನ್ನು ತಿಳಿದ ದಶರಥನು ಅಲ್ಲಿಗೆ ಗಾಬರಿಯಿಂದ ಧಾವಿಸಿದನು.

ದರಶಥನು ಶ್ರವಣನಲ್ಲಿ ಕ್ಷಮೆಯನ್ನು ಯಾಚಿಸಿದನು. ಆದರೆ ಶ್ರವಣನು ತಂದೆ, ತಾಯಿಯರ ಸೇವೆ, ಅವರ ಆಸೆಯನ್ನು ಈಡೇರಿಸಲು ತನಗೆ ಭಾಗ್ಯವಿಲ್ಲವಲ್ಲಾ – ಎಂದು ಮರುಗಿ 'ಅವರನ್ನು ಅವರ ಅಂತ್ಯದರೆಗೆ ರಕ್ಷಿಸು, ಅಲ್ಲದೆ, ಅವರ ಬಯಕೆಯನ್ನು ಸದಾ ಕಾಲವೂ ತೀರಿಸು' ಎಂದು ದಶರಥನಲ್ಲಿ ಹೇಳಿ ಪ್ರಾಣ ಬಿಟ್ಟನು. ಇದರಿಂದಾಗಿಯೇ ಮುಂದೆ ಶ್ರೀರಾಮನು ಕಾಡಿಗೆ ಹೋಗುವಂತಾಗಿ ಪುತ್ರಶೋಕದಿಂದ ದಶರಥನು ತೀರಿಕೊಳ್ಳುವಂತಾಯಿತು.

---

(16ನೇ ಪುಟದಿಂದ)

ಭಕ್ತನಾದೊಡೆ ಶ್ರೀಹರಿಯು ಒಲಿವನು, ಸಜ ನರನಿಂದೆ ತರುವ ಲಾಭವಾದರೂ ಏನು.

ಕಾರುವಾ ಮೂಸವಗೆ ಹೇಮ ಪಾತ್ರೆ-
ಯೊಳಗೆ।
ಕ್ಷೀರವ ತಂದಿತ್ತರೆ ಸುಖವಾಗೋದೆ।
ಕಿಸರಿಗೆ ಕಟ್ಟಿಕೊಂಡು ಉಸುಕು ಬಿತ್ತಿದರಿಂದ।
ಹೇರು ಹೇರು ಧಾನ್ಯ ಮನೆಗೆ
ಬರಲುಂಟೇನೊ।

*   *   *   *

ಸಿಡಿಲಿಗೆ ನಡುಗದ ಶೈಲವನ್ನು।
ಕಡುಮುಳಿದ ಮನುಜ ಕವಣೆಗಲ್ಲನು ಬಲು।
ಹೊಡೆದು ಹೊಡೆದರದಕೆ ಮಾನ
ಪೋಗುವುದೇನೊ।

*   *   *   *

ಕತ್ತೆಯ ಕೊರಳಿಗೆ ನಾನಾ ವಿಚಿತ್ರದ।
ರತ್ನ ಮುತ್ತಿನ ಮಾಲೆ ಹಾಕಿ ವೇಗ।
ಸುತ್ತು ಮುತ್ತಲ ಜನರು ನೆರೆದು
ಕೆನೆ ಮೊಸರು।
ಬುತ್ತಿಯ ತರಿಸಿ ಅದರ ಬಾಯಿಗೆ।
ತುತ್ತು ಮಾಡಿ ಕೊಡುತ ತಾಳ
ವ್ಯಾಳದ ಕೂಡ।

ಸತ್ತಿಗೆ ನೆರಳಲ್ಲಿ ಬೀದಿಯೊಳಗೆ।
ಮೊತ್ತ ರಭಸದಿಂದ ಮೆರಸಿಕೊಳ್ಳುತ್ತ
ಬರಲು।
ಅತ್ತಲಿ ಕತ್ತೆ ಮತ್ತೊಂದರನ।
ಹತ್ತಿಲಿ ಕಾಣುತ ಅದರ ಸ್ವರದಲ್ಲಿ ಮೊಗ।
ಮೆತ್ತಿ ಕೂಗದೆ ಸುಮ್ಮನಿರಬಲ್ಲದೇ।
ಉತ್ತಮ ಜನರಲ್ಲಿ ಇದ್ದರೇನು ತನ್ನ।
ಚಿತ್ತ ಸ್ವಭಾವ ಬಿಡಬಲ್ಲದೆ।

ಕಾರಣ ತೊತ್ತಿನ ಬುದ್ಧಿಯನ್ನು ತೊರೆದು, ಏಕಚಿತ್ತದಿಂದ ಪರಮಾತ್ಮನನ್ನು ಭಜಿಸು ಎಂದು ಮಾರ್ಗದರ್ಶನ ಮಾಡಿದ್ದಾರೆ.

ಪರರ ಶ್ರೇಯಸ್ಸು ನೋಡಿ ಸಂಕಟ ಬಟ್ಟವನ
ಗತಿ।
ಸೂಜಿಯ ಮೇಲೆ ಗಢಾರವು ಮನಿದಂತೆ॥

"ವಾಜಿಯ ಗಮನವು ಭೂಮಿಯ ಮೇಲಲ್ಲದೆ।
ಗೀಜಗನಂತೆ ಸಾರುವುದೇನು ಗಗನಕ್ಕೆ।"

"ತೇಜಿ ಉತ್ತಮ ನೂರಾರು ಸಾವಿರ ಬೆಲೆ।
ಗೀಜಗ ಕಾಸಿಗೆ ಬೆಲಿಗೆ ಪೋಗುವುದೇನೋ।

'ಶಿರಿಗೆ ಮಸ್ತಕವಿಟ್ಟು ಬಳಲಿ ಬೆಂಡಾದಂತೆ।
ಶರಧಿ ಮೇಲೆ ಮುನಿದು ಬಂದು ತುಡಕಿ ಧೂಳಿ।
ಭರದಿಂದ ತೂರಿದರೆ ತಲ್ಲಣಿಸುವದೇನೊ।"

ವಿಜಯದಾಸರು ತಮ್ಮ ಡೊಂಕ ತಿದ್ದಲು ತಿರುಪತಿಯ ವೆಂಕಟನನ್ನು ಅನನ್ಯ ಭಾವದಿಂದ ಸ್ತುತಿಸುತ್ತಾರೆ –

"ಡೊಂಕ ಕಾಷ್ಠವು ಇರೆ ಬೆಂಕಿಯಿಂದಲಿ
ಕಾಸಿ।
ಡೊಂಕ ತಿದ್ದಲು ಬಲು ಸರಳಾಗೋದೂ।
ವೆಂಕಟಾ ಎನ್ನಂಗ ಅಹಂಕಾರ ಲೇಪನದಿ।
ಡೊಂಕಾಗೆ ನಿನ್ನ ನಾಮಾಂಕಿತದಲಿ ಕಾಸಿ।
ಡೊಂಕ ತಿದ್ದಲಿ ಬೇಕು॥"

–ಎಂದು ಬೇಡಿಕೊಳ್ಳುತ್ತಾರೆ. ಕೊನೆಗೆ ವಿಜಯದಾಸರು, ಪನ್ನಂಗಶಾಯಿಶ್ರೀವಿಜಯ ವಿಠಲರಾಯ ನಿನ್ನವರ ಕೊಂಕು ನೀನೇ ತಿದ್ದಲಿ ಬೇಕು ಯಾಕಂದರೆ –

"ಹೆಣ್ಣು ಹೀನಾಗೆ ತವರು ಮನೆಯೇ ಗತಿ।
ಹೊನ್ನು ಹೀನವಾಗೆ ಪಾಂಚಾಲನೆ ಗತಿ।
ಕಣ್ಣು ಹೀನವಾಗೆ ಕುಳಿತ ಸ್ಥಳವೇ ಗತಿ।
ನಿನ್ನ ಸೇವಕನೀಗ ನ್ಯೂನ ಗುಣನಾಗೆ।
ನಿನ್ನ ಪಾದವೇ ಗತಿ"

ಎಂದು ಅನನ್ಯ ಭಕ್ತಿಯಿಂದ, ತಮ್ಮ ಡೊಂಕನ್ನು ತಿದ್ದುವುದಲ್ಲದೆ ಜನ, ಸಮಾಜ, ದೇಶದ ಅಂತ ಡೊಂಕಗಳನ್ನು ತಿದ್ದಲು ಶ್ರೀನಿವಾಸನನ್ನು ಪ್ರಾರ್ಥಿಸುತ್ತಾರೆ. ★

---

## ಗೃಹಲಕ್ಷ್ಮಿ

# ನೀಲಾಂಬಿಕೆ

“ಸತಿ – ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವನಿಗೆ”

—ಬಸವಣ್ಣನವರ ಈ ನುಡಿ ಇತರರಿಗೆ ಹಿತೋಪದೇಶ ಮಾಡಲಿಕ್ಕಾಗಿ ಮೂಡಿ ಬಂದುದಲ್ಲ. ಅವರು ಕಂಡುಂಡ ಜೀವನ ಸತ್ಯದ ಪರಿಣಾಮವಾಗಿ ತುಂಬು ಹೃದಯದಿಂದ ಒಡಮೂಡಿದ ಸ್ವಾನುಭವದ ನುಡಿ. ಈ ವಾಣಿ ಬಸವಣ್ಣನವರ ಜೀವನವು ಎಷ್ಟು ಆದರ್ಶವೂ, ಸುಂದರವೂ, ಸಂತೃಪ್ತಕರವೂ ಸಾರ್ಥಕವೂ ಆಗಿತ್ತೆಂಬುದನ್ನು ತಿಳಿಸುತ್ತದೆ. ಇದಕ್ಕೆ ಕಾರಣ ಅವರ ಇಬ್ಬರು ಪತ್ನಿಯರಲ್ಲಿ ಒಬ್ಬಳಾದ ನೀಲಲೋಚನೆಯ ಸಂಸರ್ಗ. ಆಕೆ ಅರ್ಧಾಂಗಿಯಾಗಿದ್ದು, ಸಹಧರ್ಮಿಣಿಯಾಗಿದ್ದು, ಪತಿಯ ಜೀವನದ ಹೆಜ್ಜೆ ಹೆಜ್ಜೆಯಲ್ಲಿಯೂ ಅವನ ನೆರಳಾಗಿ, ಊರುಗೋಲಾಗಿ ನಡೆದು ತನ್ಮೂಲಕ ತನ್ನ ಜೀವನ ಸಾರ್ಥಕ ಮಾಡಿಕೊಂಡ ಆದರ್ಶ ನಾರೀಮಣಿ.

ಪತಿಯ ಧ್ಯೇಯ, ಉದ್ದೇಶ, ಆದರ್ಶ ಸಾಧನೆಗಳಿಗನುಗುಣವಾಗಿ ತನ್ನ ಜೀವನವನ್ನು ಅಳವಡಿಸಿಕೊಂಡು ಪತಿಯಲ್ಲೇ ಪರದೈವವನ್ನು ಕಂಡು, ಜೀವನ್ಮುಕ್ತಳಾದವಳು ಅವಳು. ಅವಳ ಹೃದಯ ಹೊಂದಿದ್ದ ಸಂಸ್ಕಾರದಿಂದಾಗಿ ಜೀವನದಲ್ಲಿ ಆಧ್ಯಾತ್ಮಿಕ ಔನ್ನತ್ಯವನ್ನು ಸಾಧಿಸಿ, ಅನುಭಾವಿಯಾದವಳು. ಕನ್ನಡ ಸಾಹಿತ್ಯಲೋಕದಲ್ಲಿ ವಚನ ಸಾಹಿತ್ಯದ ಪಾತ್ರ ಅತ್ಯಮೂಲವಾದದ್ದು. ಇಂತಹ ವಚನಸಾಹಿತ್ಯದ ಕೃಷಿ ಕೈಗೊಂಡವರಲ್ಲಿ ಹೆಣ್ಣುಮಕ್ಕಳಿಗೂ ಪಾಲುಸಲ್ಲುತ್ತದೆ. ಇವರೆಲ್ಲರೂ ಬಸವಣ್ಣಾದಿ ಶಿವಶರಣರು ಹೊತ್ತಿಸಿದ, ಬೆಳಗಿಸಿದ ದೀವಿಗೆಗಳು. ಹೀಗೆ ಮೂಡಿದ ಜ್ಯೋತಿಗಳು ಜಗಜ್ಜ್ಯೋತಿಯಾಗುವ ಮಟ್ಟವನ್ನು ಮುಟ್ಟಿ ಹುಟ್ಟಿ ಬೆಳೆದ ನಾಡಿಗೆ ಹೂವು ತರುವ ಕಾಯಕ ಮಾಡಿದ್ದಾರೆ. ಇಂಥ ಕಾರ್ಯದಲ್ಲಿ ನೀಲಲೋಚನೆಯ ಪಾತ್ರವು ಬಹಳ ಹಿರಿಮೆಯುಳ್ಳದ್ದೂ, ಗರಿಮೆಯುಳ್ಳದ್ದೂ ಆಗಿದೆ.

ಸ್ವತಃ ಬಸವಣ್ಣನವರೇ ತಮ್ಮ ಪತ್ನಿಯ ಬಗ್ಗೆ ಹೇಳಿರುವ “ಎನ್ನ ಸತಿ ನೀಲಲೋಚನೆ ಪ್ರವೃತ್ತಿಗಗ್ಗಳ ಚೆಲುವೆ” ಎಂಬ ಮಾತು ನೀಲಾಂಬಿಕೆಯ ಬಹಿರಂಗ ಸೌಂದರ್ಯಕ್ಕಿಂತಲೂ, ಅಂತರಂಗ ಸೌಂದರ್ಯಕ್ಕೆ ಹಿಡಿದ ರನ್ನಗನ್ನಡಿಯಾಗಿದೆ. ಹಾಗೆಯೇ ನೀಲವ್ವೆಯೂ ಬಸವಣ್ಣನನ್ನು ಅಷ್ಟೇ ಚೆನ್ನಾಗಿ ಅರ್ಥಮಾಡಿಕೊಂಡಿದ್ದಳು,



ಅಂಗದ ಸಂಗಿಗನಲ್ಲ ನಮ್ಮ ಬಸವಯ್ಯನು,  
ಪ್ರಾಣದ ಭ್ರಮೆಯವನಲ್ಲ ನಮ್ಮ ಬಸವಯ್ಯನು  
ಉಭಯದ ಹಂಗ ಹರಿದು  
ಉಪಮಾತೀತನಾದ ನಮ್ಮ ಬಸವಯ್ಯನು  
ಸಂಗಯನಲ್ಲಿ ಕೂಡಿ ನಿರಾಳ ಪ್ರಸನ್ನ  
ಮೂರ್ತಿಯಾದ ನಮ್ಮ ಬಸವಯ್ಯನು

—ಎಂಬ ವಚನದಲ್ಲಿ ಬಸವಣ್ಣನು ಎಲ್ಲಾ ಪ್ರಕೃತಿಗಳಿಂದಲೂ ಹೇಗೆ ನಿವೃತ್ತಿ ಹೊಂದಿದ್ದನೆಂಬುದನ್ನು ಮನೋಜ್ಞವಾಗಿ ತಿಳಿಸಿದ್ದಾಳೆ. ಅನುಭವದ ಸಾರ, ವಿವೇಕದ ಸಂಗ ಹೊಂದಿದ ಬಸವಣ್ಣನು, ತನ್ನ ಪಂಚೇಂದ್ರಿಯಗಳನ್ನು ದೈವವನ್ನು ಕಾಣುವ ಸಾಧನವನ್ನಾಗಿ ಮಾಡಿಕೊಂಡು ‘ಕೈಲಾಸವನೆ ಕಲ್ಯಾಣವ ಮಾಡಿ’ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಈ ಮುಂತಾದ ಏಕಲಿಂಗನಿಷ್ಠಾಪರರಾದ ಮಹಾಪ್ರಮಥಗಣಗಳನ್ನು ತಂದು ‘ಮರ್ತ್ಯಲೋಕವನೆ ಮಹಾಪ್ರಮಥರ ಬಿಡಾರವ ಮಾಡಿದ’ನಂತೆ. ಆದ್ದರಿಂದಲೇ ಬಸವಣ್ಣನನ್ನು—

ಎನಗೆ ಲಿಂಗವು ನೀನೆ ಬಸವಯ್ಯಾ,  
ಎನಗೆ ಸಂಗವು ನೀನೆ ಬಸವಯ್ಯಾ  
ಎನಗೆ ಪ್ರಾಣವು ನೀನೆ ಬಸವಯ್ಯಾ,  
ಎನಗೆ ಪ್ರಸಾದವು ನೀನೇ ಬಸವಯ್ಯಾ  
ಎನಗೆ ಪ್ರಭೆಯ ಮೂರ್ತಿಯು ನೀನೇ ಬಸವಯ್ಯ  
ಎನಗೆ ಸಂಗಮಯ್ಯನು ನೀನೆ ಬಸವಯ್ಯ

– ಎಂದು ಆತ್ಮಸ್ವರೂಪ, ಚೈತನ್ಯ, ಗುರು ಅವನೇ ಎಂದು ನೀಲವ್ವೆ ಪರಿಭಾವಿಸಿದ್ದಾಳೆ. “ಇದ್ದೂ ಬದ್ಧನಲ್ಲ, ಸುಳಿದು ಸೂತಕಿಯಲ್ಲ” ಎಂಬ ಮಾತಿನಂತೆ ಲೌಕಿಕ ಜೀವನಕ್ಕೆ ಬದ್ಧಳಾಗದೆ ಅರಿವಿನ ಕುರುಹನಾತ್ಮದಲಿ ನಿಲಿಸಿ, ಶಿವಕೂಟ ಸಮಾಧಿಯ ಕಂಡು ಬದುಕಿದವಳು. ಬಸವಣ್ಣನ ಮಾರ್ಗದರ್ಶನದಲ್ಲಿ ಪಲ್ಲಿ ಉನ್ನತ ಮಟ್ಟವನ್ನು ಏರಿದ್ದಾಳೆ.

ಇಷ್ಟದ ಹಂಗಿಲ್ಲವೆನಗೆ ಶಿವಬಸವಾ ಶಿವಬಸವಾ  
ಪ್ರಾಣನಾಸ್ತಿ ಪ್ರಸಾದ ನಾಸ್ತಿ ಶಿವಬಸವಾ ಶಿವಬಸವಾ  
ಪರಶಿವತತ್ತ್ವ ನಾಸ್ತಿ ಸಂಗಯ್ಯಾ

—ಎಂದು ಹೇಳಿದ್ದಾಳೆ. ಏಕೆಂದರೆ

**ಭಾರ್ಗವಿಶ್ರೀ**

‘ಅಷ್ಟಮದಲ್ಲಿ ಇಷ್ಟವನು ಕಂಡು ಕಾಮದ
ಕಣ್ಣು ಕಿತ್ತು ಕರ್ಮದ ಕಾಲಮುರಿದು,

ಬಯಕೆಯ ಮುದ್ರಿಸಿ ಸಂಗಯ್ಯನಲ್ಲಿ
ಇಷ್ಟವನು

ಅಷ್ಟಮದಲ್ಲಿಯೇ ನಿಲಿಸುವ ಜ್ಞಾನ’

ಬಸವಣ್ಣನಿಂದ ಆಕೆಗೆ ದೊರಕಿದೆ. ಆಕೆಗೆ ತನು, ಪ್ರಾಣ ನೀಡಿ ನಂತರ ಮಾಯೆ ಅಳಿಸಿ ತೇಜಸ್ಸು ನೀಡಿದವನು ಬಸವಣ್ಣ. ಆದ್ದರಿಂದ ಅವಳ ಪಾಲಿಗೆ,

ಏಕಮೇವ ದೇವನೊಬ್ಬನೆ ಶರಣ
ಬಸವಯ್ಯ

ಬಸವಣ್ಣನು ಸಂಗಮಕ್ಕೆ ಹೋದಾಗ ತನ್ನ ಮಡದಿಯನ್ನೂ ಬರುವಂತೆ ಹೇಳಿ ಕಳುಹಿಸಿದನು. ಆಗ ಅವಳು –

ನಾವಲ್ಲಿದ್ದಡೇನು, ನಾವಿಲ್ಲಿದ್ದಡೇನು?
ನಮ್ಮ ನಮ್ಮ ಸಂಸರ್ಗದಲ್ಲಿ
ನಿರುಪಮಾಕಾರ ಮೂರ್ತಿಗಳಾಗಿ
ನಿರಯವವನೈದಿ ನಿಜಸುಖಿಗಳಾದೆವು
ಬಸವಯ್ಯನಲ್ಲಿ ಎಮಗೆ ಶೆರಪಿಲ್ಲಯ್ಯ,
ಅಪ್ಪಣ್ಣ
ಭಾವಶೂನ್ಯಳು ನಾನು ಸಂಗಯ್ಯ

– ಎಂದು ಹೇಳಿದ್ದಾಳೆ. ಅವಳಿಗೆ ಸರ್ವಸ್ವವೂ, ಸಂಗಯ್ಯನೂ ಬಸವಣ್ಣನೇ ಆಗಿದ್ದನು.

ಎನಗಿನ್ನೇನು ಎನಗಿನ್ನೇನು ಎನಲೇನು
ಕಾರಣ ಬಸವಾ

ಎನಗಿನ್ನಾವುದು ಪರಿಣಾಮದ ನೆಲೆಯಿಲ್ಲ
ಬಸವಾ

ಎನಗೆ ನಿನ್ನ ರೂಪು ನಿರೂಪಾದ ಬಳಿಕ
ಭಕ್ತಿಸಾರಾಯದ ಪಥವನೊಲ್ಲೆನಯ್ಯಾ
ಸಂಗಯ್ಯನ ಗುರುಬಸವಾ

–ಎಂದು ಹೇಳುತ್ತಾಳೆ. ಬಸವಣ್ಣನು ನೀಲವ್ವೆಯ ಬಗ್ಗೆ ಹೊಂದಿರುವ ಕಳವಳ ಯೋಚನೆಯನ್ನು ಕಂಡು ಅವಳೇ ಸಮಾಧಾನ ಕೊಡ ಹೇಳುತ್ತಾಳೆ. ಆ ಮಾತಾದರೂ ಆ ಚೈತನ್ಯ ಬಯಸಿದ್ದ, ಸೇರಿದ್ದ, ಗುರಿಯ ಅರಿವನ್ನು ಮಾಡಿ ಕೊಡುತ್ತದೆ.

ನಾನಾರ ಸಾರುವೆನೆಂದು
ಚಿಂತಿಸಲೇತಕಯ್ಯಾ ಬಸವಾ
ನಾನಾರ ಹೊಂದುವೆನೆಂದು
ಭ್ರಮೆಪಡಲೇತಕಯ್ಯಾ ಬಸವಾ
ನಾನಾರ ಇರವನರಿವೆನೆಂದು
ಪ್ರಳಾಪಿಸಲೇತಕಯ್ಯಾ ಬಸವಾ
ಪರಿಣಾಮ ಮೂರ್ತಿ ಬಸವನ ರೂಪು
ಎನ್ನ ಕರಸ್ಥಲದಲ್ಲಿ ಬೆಳಗಿದ ಬಳಿಕ
ಸಂಗಯ್ಯನಹಂಗು ನಮಗೇತಕ್ಕಯ್ಯಾ

ಎಂಬ ಮಾತು ಅವಳು ಹೇಗೆ ತನ್ನ ಜೀವನಕ್ಕೆ ಭದ್ರತೆ ಪಡೆದಿದ್ದಳೆಂಬುದನ್ನೂ, ಕಾಯ, ಪ್ರಾಣ, ಭಾವದ ಹಂಗು ಅವಳಿಗಿರಲಿಲ್ಲವೆಂಬುದನ್ನು ತಿಳಿಸುತ್ತದೆ.

ಅವಳು ಬಸವಣ್ಣನಲ್ಲಿ ಸಂಪೂರ್ಣ ತಾದಾತ್ಮ್ಯ ಹೊಂದಿದ್ದವಳು. ದೇಹವೆರಡು ಆತ್ಮ ಒಂದಾಗಿ ಬೆರೆತಿದ್ದವಳು 'ಎನಗೆ ಹೆಸರಳಿಯಿತ್ತು, ಕುರುಹಳಿಯಿತ್ತು ಬಸವಾ ಸಂಗಯ್ಯ ನಿನ್ನೊಳಡಗಿ ನೀನೆನ್ನೊಳಡಗಲು' ಎಂದು ಐಕ್ಯತೆಯ ಮಹತ್ವವನ್ನು ತಿಳಿಸಿದ್ದಾಳೆ. ಭಕ್ತಿಸಂಗ ಸಂಯೋಗದಿಂದ ಬಸವನಲ್ಲಿ ಬಯಲನವಲಂಬಿಸಿದಳು.

ಎಂತಹವರಿಗೂ ದುಃಖಾದಿಗಳು ಇದ್ದೇ ಇರುತ್ತವೆ. ಅಂತೆಯೇ ನೀಲವ್ವೆಯು ಪುತ್ರಶೋಕದಂತಹ ದಾರುಣ ದುಃಖಕ್ಕೀಡಾಗುತ್ತಾಳೆ. ಆದರೆ ಅವಳ ಮನಸ್ಸು ಪರಿಪಕ್ವತೆಯನ್ನು ಮುಟ್ಟಿತ್ತಾದ್ದರಿಂದ ಅವಳು ಆ ಸಮಯದಲ್ಲಿ ಧೃತಿಗೆಡದೆ ಸಂಯಮಶೀಲಳಾಗಿ, ಇಂತಹ ದುಃಖಿತರಿಗೆ ಸಾಂತ್ವನ ನೀಡುವ ರೀತಿಯಲ್ಲಿ ;

ಆಗಿಂಗೆ ಮಯ್ಯಾನದಿರು, ಚೇಗೆಗೆ
ಬೆಂಬೇಳದಿರು
ಆಹಾ ಮನವೆ ಸಂತೈಸಿಕೋ ನಿನ್ನ ನೀನೇ
ಆಗೆಂದಡೆ ನಿನ್ನ ವಶವಲ್ಲ;
ಹೋಗೆಂದಡೆ ನಿನ್ನಿಚ್ಛೆಯಲ್ಲ
ಭೋಗಾದಿ ಭೋಗಂಗಳೆಲ್ಲವೂ
ಸಂಗಯ್ಯನಧೀನವಾಗಿ

– ಎಂಬ ನಿರ್ಲಿಪ್ತತೆಯನ್ನು ಮೆರೆದಿದ್ದಾಳೆ.

'ಗುರುವಾದರೂ ಕಾಯಕದಿಂದಲೇ ಮುಕ್ತಿ' ಎಂಬಂತೆ ಅವಳಿಗೆ ಕಾಯಕ ಮುಖ್ಯವೇ ಹೊರತು ಅದರಿಂದ ದೊರೆಯುವ ಫಲವಲ್ಲ. ಬಸವಣ್ಣ ಬಯಲಾದ ಬಳಿಕವೂ ಇಂಥದೇ ನಿರ್ಲಿಪ್ತತೆಯನ್ನು ಅವಳಲ್ಲಿ ಕಾಣಬಹುದು.

ಆಡಲಿಲ್ಲವಯ್ಯಾ ನಾನು
ಹೆಣ್ಣು ರೂಪ ಧರಿಸಿ
ನುಡಿಯಲಿಲ್ಲವಯ್ಯಾ ನಾನು
ಹೆಣ್ಣು ರೂಪ ಧರಿಸಿ
ನಾನು ಹೆಣ್ಣಲ್ಲದ ಕಾರಣ ನಾನು
ಇಹಪರ ನಾಸ್ತಿಯಾದವಳಯ್ಯಾ

–ಎಂದು ಹೇಳಿರುವ ಮಾತು ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ ಎಂಬ ಮಾತಿಗೆ ವ್ಯಾಖ್ಯೆಯಂತಿದೆ.

ಎಲ್ಲಕ್ಕೂ ಮಿಗಿಲಾಗಿ ಆಕೆ ಜಿತೇಂದ್ರಿಯಳಾಗಿದ್ದಳು. "ಕಾವಲ ಕಾದಿದ್ದವರು, ಕಾವಲು ಮೀರಿ ಎನ್ನ ಸಂಗವನೆ ಮಾಡಿದರು" ಎನ್ನುವಲ್ಲಿ ಬುದ್ಧಿ ಮತ್ತು ಮನಸ್ಸುಗಳೆರಡೂ ಹೇಗೆ ತನ್ನ ವಶವಾದವೆಂಬುದನ್ನು ತಿಳಿಸಿದ್ದಾಳೆ. ಇದರಿಂದಾಗಿಯೇ ಆಕೆ ಪತಿಯ ಮಟ್ಟ ಏರಲು ಸಾಧ್ಯವಾಯಿತು.

'ಲಿಂಗಪತಿ ಶರಣಸತಿ' ಎಂಬಂಥ ಅನುಭಾವದ ಜೀವನವನ್ನು ನಡೆಸಿದ ನೀಲವ್ವೆ 'ಬಸವನ ಅನುಭವದಿಂದ ವಿವರವ ಕಂಡು ವಿಚಾರ ಪತ್ನಿಯಾದೆನಯ್ಯಾ' ಎಂದು ಜೀವನ ಸಾರ್ಥಕ್ಯ ಹೊಂದಿದರೀತಿ ತಿಳಿಸಿದ್ದಾಳೆ. ಬಸವ ನೀಲವ್ವೆಯರು ಸತಿಪತಿಗಳೇ ಆದರೂ ವಿವಾಹ ಬಂಧನದಲ್ಲಿಯೇ ಸಿಲುಕದೆ ಅನುಭಾವದ ಹಾದಿಯಲ್ಲಿ ನಡೆದು ಅಲೌಕಿಕವಾದ ಸಂಬಂಧದ ಮೂಲಕ ಸಾಕ್ಷಾತ್ಕಾರ ಪಡೆದರು. ಆದ್ದರಿಂದ ಲೌಕಿಕ ಸಂಬಂಧ ಅಳಿದರೇನು ನೀಲವ್ವೆಯಂಥ ಸಾಧಕಳಿಗೆ ನಿಜಸುಖ, ಪರಿಣಾಮ ಇದ್ದೇ ಇರುತ್ತದೆ.

ಅವಳ ಈ ಎಲ್ಲಾ ಸದ್ಗುಣಗಳಿಗೆ ಕಿರೀಟಪ್ರಾಯವೂ ಮೆರುಗನ್ನಿಯುವಂಥದ್ದೂ ಎಂದರೆ ಅವಳ ವಿನಯಶೀಲತೆ. ಅವಳು ಒಂದು ಕಡೆ

ನಾನು ನಿಮ್ಮವಳಲ್ಲಯ್ಯಾ ನಾನು
ಪ್ರಸಾದಿಗಳ ಮನೆಯ ಕೀಳುದೊತ್ತು
ನಾನು ನಿಮ್ಮವಳಲ್ಲಯ್ಯಾ ಸಂಗಯ್ಯಾ
ನಾನು ಬಸವಯ್ಯನ ಮನೆಯ ತೊತ್ತಿನ
ಮಗಳು

–ಎಂಬ ಮಾತು ಹಮ್ಮು–ಬಿಮ್ಮುಗಳಿಂದ ದೂರವಾದ ಅವಳ ಹೃದಯ ಶ್ರೀಮಂತಿಕೆಯನ್ನು ಎತ್ತಿ ಹಿಡಿಯುತ್ತದೆ. ಬಸವಣ್ಣನವರ ಒಡನಾಟದಿಂದ ಅವರ ಹಾದಿಯಲ್ಲೇ ನಡೆದು ಹೃದಯಸಂಸ್ಕಾರ ಪಡೆದ ಆ ಪುಣ್ಯಜೀವಿ ಆಸ್ತಿ-ಅಂತಸ್ತುಗಳ ದೊಡ್ಡಸ್ತಿಕೆಯನ್ನು ಪ್ರದರ್ಶಿಸದೆ ಕಿರಿಯರಲ್ಲಿ ಕಿರಿಯಳೆಂಬ ನಿರಹಂಕಾರತ್ವ ತೋರಿದ್ದಾಳೆ.

ಹೀಗೆ ಜ್ಞಾನದೀವಿಗೆಯಾಗಿ, ಭಕ್ತರ ಹೃದಯದಲ್ಲಿ ನಿಜ್ಜವೂ ಅಜ್ಜಳಿಯದಂತೆ ದೇದೀಪ್ಯಮಾನವಾಗಿ ಬೆಳಗುತ್ತಾ ಜೀವನದ ಸಾರ್ಥಕತೆಯ ಸಂಪಾದನೆ ಹೇಗೆ ಸಾಧ್ಯ ಎಂಬುದನ್ನು ನಿರೂಪಿಸಿದ್ದಾಳೆ ನಿಲಾಂಬಿಕೆ.

(12ನೇ ಪುಟದಿಂದ)

ನಾಯಂ ಲೋಕೋಽಸ್ತ್ಯಯಜ್ಞಸ್ಯ
ಕುತೋಽನ್ಯಃ ಕುರುಸತ್ತಮ ॥ 31

ಅರ್ಜುನ, ಭಗವತ್ಸಮರ್ಪಿತವಾದ ಆಹಾರವೆಂಬ ಅಮೃತವನ್ನು ಉಣ್ಣುವವರು ಶಾಶ್ವತವಾದ ಬ್ರಹ್ಮವನ್ನು ಪಡೆಯುತ್ತಾರೆ. ಯಜ್ಞವನ್ನು ಮಾಡದಿದ್ದರೆ ಈ ಲೋಕದ ಸುಖವೇ ಇಲ್ಲ. ಇನ್ನು ಪರಲೋಕದ ಮಾತೆಲ್ಲಿಯದು?

ಏವಂ ಬಹುವಿಧಾ ಯಜ್ಞಾ
ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ವಿದ್ಧಿ ತಾನ್ ಸರ್ವಾನ್
ಏವಂ ಜ್ಞಾತ್ವಾ ವಿಮೋಕ್ಷ್ಯಸೇ ॥ 32

ಹೀಗೆ ಅನೇಕ ಬಗೆಯ ಯಜ್ಞಗಳು ಯಜ್ಞಭೋಕ್ತಾರನಾದ ಭಗವಂತನ ಮುಖದಲ್ಲಿ ವ್ಯಾಪಿಸಿವೆ. ಆ ಎಲ್ಲವೂ ಕಾಯಿಕ ವಾಚಿಕ ಮಾನಸಿಕ ಕರ್ಮದಿಂದಾದವುಗಳೆಂದು ತಿಳಿ. ಹೀಗೆ ತಿಳಿದು ಕರ್ಮಮಾಡಿದರೆ ಕರ್ಮಗಳ ಕಟ್ಟಿನಿಂದ ಬಿಡುಗಡೆಯನ್ನು ಹೊಂದುವೆ.

ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್
ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ
ಜ್ಞಾನೇ ಪರಿಸಮಾಪ್ಯತೇ ॥ 33

ಅರ್ಜುನ, ವಸ್ತುಗಳನ್ನು ಹೋಮಿಸಿ ಮಾಡುವ ಯಜ್ಞಕ್ಕಿಂತಲೂ ಜ್ಞಾನರೂಪವಾದ ಯಜ್ಞವು ಹೆಚ್ಚಿನದು. ಅರ್ಜುನ, ಎಲ್ಲ ಕರ್ಮಗಳೂ ಜ್ಞಾನದ ಮೂಲಕವೇ ಪೂರ್ಣಫಲಪ್ರದವಾಗುತ್ತವೆ.

ತದ್ವಿದ್ಧಿ ಪ್ರಣಿಪಾತೇನ
ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ
ಜ್ಞಾನಿನಸ್ತತ್ತ್ವದರ್ಶಿನಃ ॥ 34

ಆತ್ಮನ ಸ್ವರೂಪವನ್ನು ತಿಳಿದು ಕಣ್ಣಾರೆ ಕಂಡವರ ಬಳಿಗೆ ಹೋಗಿ ಅಡ್ಡಬಿದ್ದು ಕೇಳಿ ಸೇವೆ ಮಾಡಿದರೆ ಅವರು ನಿನಗೆ ಜ್ಞಾನವನ್ನು ತಿಳಿಸಿಕೊಡುತ್ತಾರೆ. ಹೀಗೆ ನೀನು ಅದನ್ನು ತಿಳಿ.

ಯಜ್ಜ್ಞಾತ್ವಾ ನ ಪುನರ್ಮೋಹಂ
ಏವಂ ಯಾಸ್ಯಸಿ ಪಾಂಡವ ।
ಯೇನ ಭೂತಾನ್ಯಶೇಷೇಣ
ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ 35

ಅರ್ಜುನ, ಅದನ್ನು ತಿಳಿದರೆ ಮತ್ತೆ ನಿನಗೆ ಈಗಿನಂತೆ ಭ್ರಮೆಯುಂಟಾಗುವುದಿಲ್ಲ. ಆ ಜ್ಞಾನದಿಂದ ಎಲ್ಲ ವಸ್ತುಗಳನ್ನೂ ಎಲ್ಲರ ಅಂತರ್ಯಾಮಿಯಾದ ನನ್ನಲ್ಲಿ ನೋಡುತ್ತಿ.

ಅಪಿ ಚೇದಸಿ ಪಾಪೇಭ್ಯಃ
ಸರ್ವೇಭ್ಯಃ ಪಾಪಕೃತ್ತಮಃ ।
ಸರ್ವಂ ಜ್ಞಾನಪ್ಲವೇನೈವ
ವೃಜಿನಂ ಸಂತರಿಷ್ಯಸಿ ॥ 36

ನೀನು ಪಾಪಿಗಳೆಲ್ಲಲ್ಲ ಹೆಚ್ಚಿನ ಪಾಪಿಯಾಗಿದ್ದರೂ ಆ ಪಾಪಗಳನ್ನೆಲ್ಲ ಜ್ಞಾನರೂಪವಾದ ಹಡಗಿನಿಂದಲೇ ದಾಟುತ್ತಿ.

ಯಥೈಧಾಂಸಿ ಸಮಿದ್ಧೋಽಗ್ನಿಃ
ಭಸ್ಮಸಾತ್ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವಕರ್ಮಾಣಿ
ಭಸ್ಮಸಾತ್ಕುರುತೇ ತಥಾ ॥ 37

ಅರ್ಜುನ, ಉರಿಗೊಳಿಸಿದ ಬೆಂಕಿಯು ಕಟ್ಟಿಗೆಗಳನ್ನು ಬೂದಿಮಾಡಿಬಿಡುವಂತೆ ಜ್ಞಾನರೂಪವಾದ ಅಗ್ನಿಯು ಕರ್ಮಗಳನ್ನೆಲ್ಲ ಬೂದಿಮಾಡಿಬಿಡುತ್ತದೆ.

ನ ಹಿ ಜ್ಞಾನೇನ ಸದೃಶಂ
ಪವಿತ್ರಮಿಹ ವಿದ್ಯತೇ ।
ತತ್ ಸ್ವಯಂ ಯೋಗಸಂಸಿದ್ಧಃ
ಕಾಲೇನಾತ್ಮನಿ ವಿಂದತಿ ॥ 38

ಜ್ಞಾನಕ್ಕೆ ಸರಿಜೋಡಿಯಾದ ಪಾವನವಸ್ತು ಈ ಲೋಕದಲ್ಲಿ ಇನ್ನೊಂದು ಇಲ್ಲ. ಏಕಾಗ್ರವಾದ ಮನಸ್ಸನ್ನು ನೆಲೆಗೊಳಿಸಿಕೊಂಡವನು ಆ ಜ್ಞಾನವನ್ನು ಬಹುಕಾಲದ ಮೇಲೆ ತನ್ನಲ್ಲಿ ತಾನು ತಿಳಿಯುತ್ತಾನೆ.

ಶ್ರದ್ಧಾವಾನ್ ಲಭತೇ ಜ್ಞಾನಂ
ತತ್ಪರಃ ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಂ
ಅಚಿರೇಣಾಧಿಗಚ್ಛತಿ ॥ 39

ಶ್ರದ್ಧೆಯಿಟ್ಟು ಭಗವಂತನನ್ನು ನಂಬಿ ಇಂದ್ರಿಯಗಳನ್ನು ಬಿಗಿಹಿಡಿದವನಿಗೆ ಆ ಜ್ಞಾನ ಲಭಿಸುತ್ತದೆ. ಜ್ಞಾನವನ್ನು ಪಡೆದವನು ತಡವಿಲ್ಲದೆ ಪರಮ ಸುಖರೂಪವಾದ ಪದವನ್ನು ಪಡೆಯುತ್ತಾನೆ.

ಅಜ್ಞಶ್ಚಾಶ್ರದ್ದಧಾನಶ್ಚ
ಸಂಶಯಾತ್ಮಾ ವಿನಶ್ಯತಿ ।
ನಾಯಂ ಲೋಕೋಽಸ್ತಿ ನ ಪರೋ
ನ ಸುಖಂ ಸಂಶಯಾತ್ಮನಃ ॥ 40

ಆತ್ಮದ ಸ್ವರೂಪವನ್ನು ಅರಿಯದವನಿಗೆ, ಬಲ್ಲವರ ಮಾತಿನಲ್ಲಿ ವಿಶ್ವಾಸವಿಲ್ಲದವನಿಗೆ, ಪ್ರತಿಯೊಂದನ್ನು ಸಂಶಯದಿಂದ ಕಾಣುವವನಿಗೆ ಉದ್ಧಾರದ ದಾರಿಯಿಲ್ಲ. ಸಂಶಯಗ್ರಸ್ತನಿಗೆ ಈ ಲೋಕವೂ ಇಲ್ಲ; ಪರಲೋಕವೂ ಇಲ್ಲ; ಸುಖವೂ ಇಲ್ಲ.

ಯೋಗಸಂನ್ಯಸ್ತಕರ್ಮಾಣಂ
ಜ್ಞಾನಸಂಛಿನ್ನಸಂಶಯಮ್ ।
ಆತ್ಮವಂತಂ ನ ಕರ್ಮಾಣಿ
ನಿಬಧ್ನಂತಿ ಧನಂಜಯ ॥ 41

ಅರ್ಜುನ, ಭಗವದರ್ಪಣ ಬುದ್ಧಿಯಿಂದ ಕರ್ಮಗಳನ್ನು ಮಾಡುತ್ತ, ತತ್ತ್ವಜ್ಞಾನದ ಮೂಲಕ ಸಂಶಯವನ್ನು ಕಳೆದುಕೊಂಡ ವಿವೇಕಿಯನ್ನು ಕರ್ಮಗಳು ಕಟ್ಟಿಹಾಕುವುದಿಲ್ಲ.

ತಸ್ಮಾದಜ್ಞಾನಸಂಭೂತಂ
ಹೃತ್ಸ್ಥಂ ಜ್ಞಾನಾಸಿನಾಽಽತ್ಮನಃ ।
ಛಿತ್ತ್ವೈನಂ ಸಂಶಯಂ ಯೋಗಂ
ಆತಿಷ್ಠೋತ್ತಿಷ್ಠ ಭಾರತ ॥ 42

ಆದ್ದರಿಂದ ಅರ್ಜುನ, ಅಜ್ಞಾನದಿಂದ ಮನಸ್ಸನ್ನು ಕಾಡುತ್ತಿರುವ ಈ ಸಂಶಯವನ್ನು ಜ್ಞಾನರೂಪವಾದ ಶಕ್ತಿಯಿಂದ ಕತ್ತರಿಸಿ ಫಲದಾಸೆಯನ್ನು ಬಿಟ್ಟು, ಕರ್ಮವನ್ನು ಮಾಡು ಏಳು.

ಇತಿ

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಜ್ಞಾನಕರ್ಮಸಂನ್ಯಾಸಯೋಗೋ ನಾಮ ಚತುರ್ಥೋಽಧ್ಯಾಯಃ ॥

4ನೇ ಅಧ್ಯಾಯ ಮುಗಿದುದು. ★

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

(8ನೇ ಪುಟದಿಂದ)

ತಮ್ಮ ಕವಿಹೃದಯದಿಂದ ಹಾಡಿದ ಎರಡನೆ ತಿರುವಂದಾದಿಯ ಮೊದಲ ಪದ್ಯ ಹೀಗಿದೆ.

ಅನ್ಬೇ ತಹಳಿಯಾ ಆರ್ವಮೇ ನೆಯ್ಯಾಹ
ಇನ್ಬುರುಹು ಶಿಂದೈಯಿಡುತಿರಿಯಾ–ನನ್ಬುರುಹಿ
ಜ್ಞಾನ ಚ್ಚೂಡರ್ ವಿಳಕ್ಕೇತ್ತಿನೇನ್
ನಾರಣರ್ಕ್ಕು
ಜ್ಞಾನತ್ತಮಿಳ್ ಪುರಿಂದ ನಾನ್

ಭಕ್ತಿಯೇ ಹಣತೆಯಾಗಿ ಆಸೆಯೇ ತುಪ್ಪವಾಗಿ ಭಕ್ತಿಪರವಶತೆಯಲ್ಲಿ ಹುಟ್ಟಿದ ಆನಂದದಿಂದ ನಶಿಸಿದ ಚಿಂತೆಯೇ ಬತ್ತಿಯಾಗಲು ಆತ್ಮವು ದೇವರ ಸಾನ್ನಿಧ್ಯದಿಂದ ಪುಳಕಿತವಾಗಲು ಕರಗಿ ನೀರಾಗಿ ಜ್ಞಾನದ ಸೊಡರನ್ನು ಹೊತ್ತಿಸಿದೆನು. ನಮ್ಮ ನಾರಾಯಣನಿಗೆ ಜ್ಞಾನ ದೀಪವನ್ನು ತಮಿಳು ಗೀತೆಯಿಂದ ರಚಿಸಿ ಹೊತ್ತಿಸಿದೆನು.

ಮೂರನೆಯ ಆಳ್ವಾರ್ ರಚಿಸಿದ ತಿರುವಂದಾದಿಯ ಮೊದಲಪದ್ಯ ಹೀಗಿದೆ ;

ತಿರುಕ್ಕಂಡೇನ್ ಪೊನ್‌ಮೇನಿಕಂಡೇನ್
ತಿಹಳುಂ
ಅರುಕ್ಕನಣಿ ನಿರಮುಂ ಕಂಡೇನ್
ಶೆರುಕ್ಕಿಳರುಂ
ಪೊನ್ನಾಳಿ ಕಂಡೇನ್, ಪುರಿಶಂಗಂ
ಕೈಕ್ಕಂಡೇನ್
ಎನ್ನಾಳಿ ವಣ್ಣನ್ ಪಾಲಿನ್ರು

(ಸಿರಿಯ ಕಂಡೆನು, ಹೊನ್ನಿನ ಕಡಲಕಂಡೆನು
ಬೆಳಗುವ ಸೂರ್ಯನ ಚೆಲುವ ಹೊಗರ
ಕಂಡೆನು
ರಣದಿ ಮಿಂಚುವ ಹೊನ್ನ ಚಕ್ರ,
ಬಲಮುರಿಶಂಖದ
ಸುಂದರ ಕೈಯ್ಯನು, ನನ್ನ ಕಡಲ ಬಣ್ಣದ
ಹರಿಯ ಬಳಿ ಕಂಡೆನು)

ಈ ಸುಂದರ ಪದ್ಯಗಳಲ್ಲಿ ನಮಗೆ ವೇದ ಘೋಷದ ಮೊದಲನೆಯ ಅಂಕದ ಸಾರಸ್ವತದ ಅನುಭವವಾಗುತ್ತದೆ. ಕತ್ತಲಿನಿಂದ ಬೆಳಕಿಗೆ ಬರಲು ಕಳಕಳಿಯಿಂದ ಭಗವಂತನನ್ನು ಕೊಂಡಾಡುವ ಮನೋಭಾವ ಇಲ್ಲಿದೆ. ಧರಣಿ, ಹಣತೆ, ಕಡಲು, ಸೂರ್ಯ, ಭವಸಾಗರ, ಚಕ್ರವಾಚಿಯ ಕೆಂದಾವರೆ, ಜ್ಞಾನದ ಸೊಡರು, ಅನಂತ ಕೋಟಿ ಸೂರ್ಯಪ್ರಕಾಶ-ಇವುಗಳ ಸ್ಮರಣೆಯಿಂದ ಕ್ರಮವಾಗಿ ಪೃಥ್ವಿಯ ಸೃಷ್ಟಿ, ಜೀವಸೃಷ್ಟಿ, ಕಡಲಿನ ವೈಶಾಲ್ಯ, ಗಾಂಭೀರ್ಯ, ಸಮುದ್ರಮಥನದಿಂದ ಲಭ್ಯವಾದ ವಿಷ, ಶಿವನಲೀಲೆ, ಲಕ್ಷ್ಮಿ, ಐರಾವತಗಳ ಜನನ ಅಮೃತವನ್ನು ದೇವತೆಗಳು ಹಂಚಿಕೊಂಡ ಕಥೆ – ಇವು ನಮ್ಮ ಮನಸ್ಸಿಗೆ ಬರುತ್ತವೆ. ಇಲ್ಲಿನ ಸೂರ್ಯ ಒಂದು ಮಹತ್ವದ ಸಂಕೇತ ಆಗುತ್ತದೆ. ವೇದಕಾಲದಿಂದಲೂ ಸೂರ್ಯ ಉಪಾಸನೆಯ ದೇವತೆ. ಋಗ್ವೇದದಲ್ಲಿ ಹತ್ತು ಸೂಕ್ತಗಳು ಸೂರ್ಯನನ್ನು ಸ್ತುತಿಸುತ್ತವೆ. ಸೂರ್ಯ ಜಗಚ್ಚಕ್ಷು, ಸರ್ವದರ್ಶಿ. ಅವನು ಹುಟ್ಟಿದ ಕೂಡಲೇ ಅರಿವಿನಿಂದ ಪ್ರೇರಿತರಾಗಿ ತಾವು ಅನುಷ್ಠಿಸಬೇಕಾದ ಕೆಲಸಗಳತ್ತ ಮನಸ ಕೊಡುತ್ತಾರೆ. ಸೂರ್ಯ ಜ್ಞಾನದ ಸಂಕೇತ. ಸರ್ವರೋಗ ನಿವಾರಕ, ಅಜ್ಞಾನ ನಿವಾರಕ, ಮಳೆಗೂ ಕಾರಣಭೂತ. ಸರ್ವರಿಗೂ ಅನ್ನ ದಾತನೂ ಅವನೇ. ಇಂತಹ ಬೆಳಕನ್ನು ನೀಡುವ ಪರಮಾತ್ಮನನ್ನು ಆಳ್ವಾರರು ಎಷ್ಟು ಕೊಂಡಾಡಿದರೂ ಅವರಿಗೆ ತೃಪ್ತಿಯಿಲ್ಲ.

ಪರಮಾತ್ಮನ ಸ್ವರೂಪ ವೈಲಕ್ಷಣ್ಯವನ್ನೂ ಅಂತಹ ಸ್ವರೂಪಕ್ಕೆ ಉಜ್ವಲತೆಯನ್ನುಂಟು ಮಾಡುವ ಅವನ ಕಲ್ಯಾಣಗುಣಗಳನ್ನೂ ಅವನು ನಿರ್ವಹಿಸುವ ಸೃಷ್ಟಿ ಸ್ಥಿತಿ ಲಯ ಮೋಕ್ಷ ಮುಂತಾದ ಲೀಲೆಗಳನ್ನೂ ಹೊಗಳುತ್ತಾ ಅವನನ್ನು ಭಜಿಸುವಂತೆ ಮನವನ್ನು ಪ್ರಚೋದಿಸುತ್ತಾರೆ.

ಅರ್ಚಾವತಾರವೇ ಸಮಸ್ತ ಚೇತನರಿಗೆ ಉಪಾಸ್ಯವಾಗಿಯೂ ಪ್ರಾಪ್ಯವಾಗಿಯೂ ಇರುವುದು. ಶಾಸ್ತ್ರೀಯವಾಗಿ ಪ್ರತಿಷ್ಠೆ ಮಾಡಿದ ಮೂರ್ತಿಯಲ್ಲಿ ಭಗವತ್ ಸಾನ್ನಿಧ್ಯವಿರುತ್ತದೆ ಎಂಬುದಾಗಿ ಶಾಸ್ತ್ರಗಳೂ ಪುರಾಣಗಳೂ ಸಾರುತ್ತವೆ. ಈ ಮೂವರು ಆಳ್ವಾರರು ಅಂತಹ ಅರ್ಚಾಮೂರ್ತಿಯನ್ನು ಕುರಿತು 'ನಾಲ್ಕುಕಡೆ ಮನುಷ್ಯ ಪೂಜಿಸಿ ಭಜಿಸಿದರೆ ಶರೀರಾವಸಾನದಲ್ಲಿ ಸಕಲ ಕರ್ಮಗಳಿಂದ ಮುಕ್ತನಾಗುತ್ತಾನೆ; ಕಾರಣ ಈ ನಾಲ್ಕು ಸ್ಥಳಗಳಲ್ಲಿ ಸ್ವಾಮಿ ನೆಲೆಸಿದ್ದಾನೆ' ಎಂದು ಹಾಡಿದ್ದಾರೆ. ಈ ನಾಲ್ಕು ದಿವ್ಯಕ್ಷೇತ್ರಗಳು ಕ್ರಮವಾಗಿ ತಿರುವೆಂಗಡಂ (ತಿರುಪತಿ) ವಿಣ್ಣಗರಂ, ಯಥೋಕ್ತಾರಿ ಸನ್ನಿಧಿ ಹಾಗೂ ತಿರುಕ್ಕೋಯಿಲೂರ್. ಈ ನಾಲ್ಕು ದಿವ್ಯ ಸ್ಥಳಗಳಲ್ಲಿ ದೇವರು ನಿಂತು, ಕುಳಿತು, ಮಲಗಿ, ನಡೆಯುವ ಭಾವಭಂಗಿಯಲ್ಲಿ ಅರ್ಚಾವತಾರಿಯಾಗಿ ಭಕ್ತರ ಬಂಧುವಾಗಿ ನೆಲೆಸಿದ್ದಾನೆ. ಮನುಷ್ಯ ನಿಂತು ಮಲಗಿ ಕುಳಿತು ನಡೆಯುವಾಗ ಮಾಡುವ ಎಲ್ಲ ಪಾಪಗಳೂ ಈ ದಿವ್ಯ ಮೂರ್ತಿಗಳನ್ನು ದರ್ಶನ ಮಾಡಿದರೆ ಹೋಗುತ್ತವೆ. ಇದನ್ನೇ ಪೊಯ್‌ಗೈಯಾಳ್ವಾರರು ತಮ್ಮ 77ನೇ ಪಾಶುರದಲ್ಲಿ ಹಾಡಿದ್ದಾರೆ.

ವೇಂಗಡಮುಂ ವಿಣ್ಣಗರುಂ ವೆಃಕಾವುಂ
ಅಃಕಾದ
ಪೂಂಕಿಡಂಗಿನ್ ನೀಳ್ ಕೋವಳ್ ಪೊನ್ನಗರುಂ
ನಾನ್ಗಿಡತ್ತುಂ
ನಿನ್ರಾನ್ ಇರುಂದಾನ್ ಕಿಡಂದಾನ್
ನಡಂದಾನ್
ಎನ್ರಾಲ್ ಕೆಡುಮಾಂ ಇಡರ್

ನಿಂತ ತಿರುವೆಂಗಡ ಸ್ವಾಮಿಯನ್ನು ಕುರಿತು 26ನೇ ಪಾಶುರದಲ್ಲಿ



ಎಳುವಾರ್ ವಿಡೈಕೊಳ್ವಾರ್ ಈನ್
ತುಳಾಯಾನೈ
ಎಳುವಾವಹೈ ನಿನ್ರೆಂದು ವೈಗಲ್
ತೊಳುವಾರ್
ವಿನೈಚ್ಚುಡರೈ ನಂದವಿಕ್ಕುಂ ವೇಂಗಡಮೇ
ವಾನೋರ್
ಮನಚ್ಚುಡರೈ ತೂಂಡು ಮಲೈ

ತಿರುಮಲೆಯನ್ನು ನಿತ್ಯಸೂರಿಗಳೂ ಐಶ್ವರ್ಯವನ್ನು ಬೇಡುವ ಭಕ್ತರೂ ಕೈವಲ್ಯಾಪೇಕ್ಷಿಗಳೂ ಅವನ ಸನ್ನಿಧಿಯನ್ನು ಬಿಡಲಾರದೆ ಸದಾ ಸೇವಿಸುತ್ತಿದ್ದರೂ ನಿತ್ಯಸೂರಿಗಳು ಸದಾ ಸಂತಸದಿಂದ ಸ್ವಾಮಿಯನ್ನು ಸ್ಮರಿಸುತ್ತಿದ್ದಾರೆ.

ಪೂದತ್ತಾಳ್ವಾರರು ಪರಮಾತ್ಮನ ಅವತಾರ ವಿಶೇಷಗಳನ್ನು ಜೀವಾತ್ಮ ಪರಮಾತ್ಮ ಸಂಬಂಧವನ್ನು ಕುರಿತು ಹಾಡಿದ್ದಾರೆ. ಆಳ್ವಾರರು ಎರಡನೆಯ ತಿರುವಂದಾದಿಯ ಐದನೆಯ ಪಾಶುರದಿಂದ ವಾಮನ ತ್ರಿವಿಕ್ರಮ ಅವತಾರವನ್ನು ಕೊಂಡಾಡಿದ್ದಾರೆ. ಪರಮಾತ್ಮನು ಬಲಿಯನ್ನು ಮೂರು ಅಡಿ ಭೂಮಿಯನ್ನು ಬೇಡಿ ಮೂಜಗವನ್ನೇ ಆಕ್ರಮಿಸಿಕೊಂಡ. ಅಂತೆಯೇ ನಾವು ಸ್ವಾಮಿಯ ಸ್ವಲ್ಪ ಅನುಸಂಧಾನ ಮಾಡಿದರೂ ಸ್ವಾಮಿ ಸರ್ವವ್ಯಾಪಿಯಾಗಿ ನಮ್ಮನ್ನೇ ಆವರಿಸುತ್ತಾನೆ. ಎರಡನೆಯ ತಿರುವಂದಾದಿಯಲ್ಲಿ ಪೂದತ್ತಾಳ್ವಾರ್ ಶ್ರೀಕೃಷ್ಣ, ಶ್ರೀ ರಾಮ, ನರಸಿಂಹಾವತಾರಗಳನ್ನು ಕುರಿತು ಪಾಶುರಗಳನ್ನು ರಚಿಸಿದ್ದಾರೆ. ಶ್ರೀ ವೆಂಕಟಾಚಲಪತಿಯನ್ನು ಕುರಿತು 27ನೇ ಪಾಶುರದಲ್ಲಿ

ಪತಿ ಅನ್ರೆಂದು ನಾಡಿ ಪರುತ್ತು ವಿರಂದಶಿಂದೈ
ಮರೆ ಉರಿಂಜ ವಾನ್ ಮುಹುಡು ನೋಕ್ಕಿ–
ಗತಿ ಮಿಹುತ್ತಂ

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಆಡಳಿತ ನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

ಕೋಲ್ ತೇಡಿ ಓಡುಂ ಕೊಳುಂದದೇ
ಪೋವುದೇ
ಮಾಲ್ ತೇಡಿ ಓಡುಂ ಮನಂ

–'ಶ್ರೀ ವೆಂಕಟಾದ್ರಿಯಲ್ಲಿ ಸರ್ವೇಶ್ವರನಲ್ಲಿ ನಿಂತ ನನ್ನ ಮನ ಚಂದ್ರಲೋಕ ದಾಟಿ ಆಕಾಶವನ್ನು ಮೀರಿ ವೈಕುಂಠಪತಿಯನ್ನು ಹುಡುಕುತ್ತ ಓಡುತ್ತಿದೆ. ಸುಂದರ ಕೊಂಬೆಯನ್ನು ಹುಡುಕುವ ಬಳ್ಳಿಯ ತೆರದಿ', ಎಂಬುದಾಗಿ ಹಾಡಿದ್ದಾರೆ ಪರಮಾತ್ಮನನ್ನು ಕಾಣಲು ಭಕ್ತಿ ಅತ್ಯವಶ್ಯಕ. ಭಕ್ತಿಯೇ ಹಣತೆ, ಅವನನ್ನು ಕಾಣಬೇಕೆಂಬ ಆಸೆಯೇ ಪ್ರಜ್ವಲಿಸಿ ಹತ್ತಿಕೊಂಡು ಪ್ರಕಾಶಮಾನವಾಗಿ ಬೆಳಗಲು ಆ ಸ್ವಾಮಿಯ ಸಾಕ್ಷಾತ್ಕಾರವಾಗುತ್ತದೆ ಎಂಬುದೇ ಪೂದತ್ತಾಳ್ವಾರರ ಸಂದೇಶ.

ಮೂರನೆಯವರಾದ ಪೇಯಾಳ್ವಾರ್ ಅವರು ತಮ್ಮ ಪಾಶುರಗಳಲ್ಲಿ ಸರ್ವೇಶ್ವರನ ನಿರಂಕುಶ ಸ್ವಾತಂತ್ರ್ಯವನ್ನು ಅನುಮೋದಿಸುತ್ತಾ, ಸರ್ವೇಶ್ವರನ ಕೃಪೆಯು ಫಲಿಸುವುದು ಲಕ್ಷ್ಮಿಯ ಸಾನ್ನಿಧ್ಯದಲ್ಲಿಯೇ ಎನ್ನುತ್ತಾರೆ. ಲಕ್ಷ್ಮಿಯು ಸರ್ವಲೋಕ ಜನನಿಯಾದ ಪ್ರಯುಕ್ತ ಸಮಸ್ತ ಚೇತನ ವರ್ಗದಿಂದ ಸೇವ್ಯಳು.

ಅಶ್ವಪೂರ್ವಾಂ ರಥ ಮಧ್ಯಾಂ ಹಸ್ತಿನಾದ
ಪ್ರಬೋಧಿನೀಮ್ ।
ಶ್ರಿಯಂ ದೇವೀಂ ಉಪಹ್ವಯೇ ಶ್ರೀರ್ಮಾ
ದೇವೀ ಜುಷತಾಮ್ ॥

–ಯಾವಳಿಗೆ ವಿಷ್ಣುವು ಮುಂದಾಳಾಗಿರುವನೋ, ಯಾವಳು ಮನುಷ್ಯರ ಹೃದಯದಲ್ಲಿ ನೆಲೆಸಿರುವಳೋ, ಯಾವಳು ಆರ್ತರ ಮೊರೆಯಿಂದ ಎಚ್ಚರಗೊಳ್ಳುವಳೋ, ಅಂತಹ ಲಕ್ಷ್ಮೀದೇವಿಯನ್ನು ಪ್ರಾರ್ಥಿಸುವೆ ಎಂಬ ಭಾವನೆಯನ್ನೇ ವಿವರಿಸುವಂತೆ ತಮ್ಮ ಪಾಶುರದಲ್ಲಿ ಹಾಡಿದ್ದಾರೆ. ವಿಷ್ಣುವಿನ ವಕ್ಷಃಸ್ಥಳದಲ್ಲಿ ನಿರಂತರವೂ ನೆಲೆಸಿರುವ ಆ ಮಹಾಮಾತೆ ಸದಾ ದಯಾಪರಳು. ಕಂದನಿಗಾಗಿ ಕಾತರದಿಂದ ಕಾದು ಕುಳಿತ ಕೃಪಾಮಯಿ.

ಲಕ್ಷ್ಮೀ ಪುರುಷ ಕಾರಣಂ ವಲ್ಲಭಾ
ಪ್ರಾಪ್ತಯೋಗಿನೀ ।
ಏಕಸ್ಯಾಶ್ಚ ವಿಶೇಷೋಽಯಂ
ನಿಗಮಾಂತೇಷು ಶಬ್ದ್ಯತೇ ॥

- ಎಂಬ ಅನೇಕ ಪ್ರಮಾಣಗಳಿಂದ ಮಹಾಲಕ್ಷ್ಮಿಯನ್ನು ಪುರುಷಕಾರವಾಗಿ ಪುರಸ್ಕರಿಸಿ ಭಗವಂತನನ್ನು ಆಶ್ರಯಿಸುವುದು ಆ ಭಗವಂತನಿಗೂ ಪ್ರಿಯ. ಎಲ್ಲ ಪಾಪಗಳನ್ನೂ ಹೋಗಲಾಡಿಸುವ ಆತ ಭವರೋಗವೈದ್ಯ. ಸಕಲ ಸಂಪತ್ತು ಅಮೃತತ್ವವನ್ನು ನೀಡುವವನು ಅವನು ಎಂಬುದಾಗಿ ನಾಲ್ಕನೆಯ ಪಾಶುರದಲ್ಲಿ 'ಮರುಂದುಂ ಪೊರುಳುಂ ಅಮುದಮುಂ ತಾನೇ ಎಂದು ಹಾಡಿದ್ದಾರೆ. ತಿರುವೆಂಗಡ ನಾಯಕನನ್ನು ಹದಿನೆಂಟು ಪಾಶುರಗಳಲ್ಲಿ ವಿಧವಿಧವಾಗಿ ಕೊಂಡಾಡಿದ್ದಾರೆ. ಶ್ರೀಯಃಪತಿಯು ವಾಸ ಮಾಡುವ ಸ್ಥಳಗಳು ನಾಲ್ಕು. ಕ್ಷೀರಸಾಗರ, ಆದಿಶೇಷ, ವೈಕುಂಠ ಹಾಗೂ ನಾಲ್ಕನೆಯದೇ ವೇಂಕಟಾದ್ರಿ ಮೊದಲ ಮೂರು ದುರ್ಲಭ. ಇದನ್ನೇ 32ನೇ ಪಾಶುರದಲ್ಲಿ

ಪಾರ್ಕಡಲುಂ ವೇಂಗಡಮುಂ ಪಾಂಬುಂ
ಪನಿವಿಸುಂಬುಂ
ನೂರ್ಕಡಲುಂ ನುಣ್‌ನೂಲ ತಾಮರೈ
ಮೇಲ್-ಪಾಲ್ ಪಟ್ಟು
ಇರುಂದಾರ್ ಮನಮುಂ
ಇಡಮಾಹಕ್ಕೊಂಡಾನ್
ಕುಮುಂದು ಒಶಿತ್ತ ಗೋಪಾಲಕನ್

ಎಂಬುವಲ್ಲಿ ಹಾಡಿದ್ದಾರೆ. ಈಶ್ವರನು ಕ್ಷೀರಸಾಗರದಲ್ಲಿ (ವ್ಯೂಹಾವತಾರಿ) ಮಲಗಿ, ವೆಂಕಟಾಚಲದಲ್ಲಿ ಶ್ರೀನಿವಾಸನಾಗಿ ನಿಂತು ವೈಕುಂಠದಲ್ಲಿ ಕುಳಿತು ಗರುಡನ ಮೇಲೆ ಸಂಚರಿಸುವವನಾಗಿ ವೇದಗಳಿಗೆ ಅಗೋಚರನಾದರೂ ಯೋಗಿಗಳ ಹೃದಯಾಂತರಾಳಗಳಲ್ಲಿ ಗೋಚರನಾಗಿ ಸ್ಫುರಿಸುವ ಆ ಸ್ವಾಮಿಯ ಮಹಿಮೆಯನ್ನು ಭಕ್ತಿಯಿಂದ ಹಾಡಿದ್ದಾರೆ ಭಕ್ತರ ಅಭೀಷ್ಟವನ್ನು ಪೂರೈಸಲು ಸ್ವಾಮಿ ಕ್ಷೀರಸಾಗರವನ್ನು ಪರಮಪದವನ್ನೂ ಶೇಷಗರುಡರನ್ನೂ ಬಿಟ್ಟು, ವೆಂಕಟಾದ್ರಿಯಲ್ಲಿ ಜಾಗ್ರತನಾಗಿ ನಿಂತಿದ್ದಾನೆ. ಪ್ರಾಣಿಗಳೂ ಸಹ ಈ ಸ್ವಾಮಿಯನ್ನು ಸೇವಿಸುತ್ತವೆ. ವಾನರ, ಗಜಗಳು, ದುಂಬಿಗಳು ಪೂಜಿಸುತ್ತವೆ. ಈ ತಿರುಮಲೆಯಲ್ಲಿ ಸ್ವಾಮಿ ತನ್ನ ಶ್ರೀಪಾದಂಗಳನ್ನು ಭಕ್ತರಿಗೆ ತೋರುತ್ತಾ ನಿತ್ಯ ನಿವಾಸನಾಗಿ ನಿಂತಿದ್ದಾನೆ ಎಂಬುವುದಾಗಿ ಹಾಡಿದ್ದಾರೆ. ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟ ಶ್ರೀದೇವಿಯ ತತ್ತ್ವವನ್ನು ಮೊದಲನೆಯದಾಗಿ ಪೇಯಾಳ್ವಾರರು ತಮ್ಮ ಮೂರನೆಯ ತಿರುವಂದಾದಿಯಲ್ಲಿ ಮಾನವ ಲೋಕಕ್ಕೆ ನೀಡಿದ್ದಾರೆ. ಇಂತಹ ಪೇಯಾಳ್ವಾರರು ಪರಮಗುರುಗಳು. ಈಚಿಗೆ ಮೇಲಿನ ಮೊದಲಾಳ್ವಾರರ ತಿರುವಂದಾದಿಗಳನ್ನು ಕನ್ನಡಕ್ಕೆ ಅನುವಾದಿಸಿ ವೇದಾಂತ ವಿದ್ವಾನ್ ಎನ್ ಎಸ್. ಅನಂತರಂಗಾಚಾರ್ಯರು ತಿರುಮಲೆ ತಿರುಪತಿ ದೇವಸ್ಥಾನದವರ ನೆರವಿನಿಂದ ಪ್ರಕಟಿಸಿದ್ದಾರೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಅ.ನ. ಶ್ರೀನಿವಾಸ ಅಯ್ಯಂಗಾರ್ ಹಿಂದಿನ ಅಪಗ ಮನವಾಳ ಜೀಯರ್, ಕಲ್ಕಿಸ್ವಾಮಿಗಳು, ದಿವಂಗತ ಜಿ. ಪಿ. ರಾಜರತ್ನಂ ಮುಂತಾದ ಮಹನೀಯರು ತಮಿಳಿನ ಈ ದಿವ್ಯ ಪ್ರಬಂಧಗಳನ್ನು ಕನ್ನಡಕ್ಕೆ ಅನುವಾದಮಾಡಿ ಉಪಕಾರ ಮಾಡಿದ್ದಾರೆ

(6ನೇ ಪುಟದಿಂದ)

ಆದರೆ ಧಾರೆಯೆರೆದ ಮರುಕ್ಷಣದಲ್ಲಿ ಅವನ ಆಕಾರ 'ಆ' ಕಾರದ ಹಾಗೇ ದೀರ್ಘವಾಗ ತೊಡಗಿತು, ಸ್ವರ್ಗಮರ್ತ್ಯಪಾತಾಳಗಳನ್ನು ವ್ಯಾಪಿಸಿತು, ಬ್ರಹ್ಮಾಂಡದ ಸಕಲವೂ ಅವನ ಆಕಾರದ ಆಳತೆಯಲ್ಲಿ ಸಿಕ್ಕಿಕೊಂಡಿತು. ಎಲ್ಲವೂ ಅವನೇ, ಎಲ್ಲೆಲ್ಲೂ ಅವನೇ ಎಂಬ ಸತ್ಯದ ದರ್ಶನವಾಯಿತು. ತನ್ನ ವಿರಾಟ್ ಸ್ವರೂಪದಿಂದ ತ್ರಿವಿಕ್ರಮನು ಎಲ್ಲರನ್ನೂ ದಿಗ್ಭ್ರಮೆಗೊಳಿಸಿ ಎದುರಿಗೆ ನಿಂತನು, ಸಾಮೋಪಾಯದ ಸವಾಲಿಗೆ ಸಾಮೋಪಾಯದ ಪರಿಹಾರ. ಚಕ್ರವರ್ತಿಯು ಚಾಪೆಯ ಕೆಳಗೆ ನುಸಿದು ಇಂದ್ರಪದವಿ ಬಯಸಿದ, ಆದರೆ ಶ್ರೀಹರಿಯು ವಾಮನ ರೂಪಿಯಾಗಿ ಚಾಪೆಯಡಿಯ ರಂಗವಲ್ಲಿಯ ಕೆಳಗೇ ನುಸಿದು ಅವನ ಆಸೆಯನ್ನು ಮುರಿದ, ತ್ರಿವಿಕ್ರಮರೂಪಿಯಾಗಿ ಒಂದು ಕಾಲನ್ನು ತ್ರಿವಿಷ್ಟಪದಲ್ಲಿಟ್ಟು. ಬ್ರಹ್ಮನಿಂದ ಪಾದವನ್ನು ತೊಳೆಸಿಕೊಂಡು, ಆ ವಿಯದ್ಗಂಗೆಯಿಂದ ಬಲಿಗೂ ಅಭಿಷೇಚನ ಮಾಡಿಸಿ, ಮೋಹ ಬಿಡಿಸಿ, ಮೋಕ್ಷ ನೀಡುವ ತನ್ನ ಪಾದವನ್ನು ಅವನ ತಲೆಯ ಮೇಲಿಟ್ಟು ಪಾತಾಳ ಲೋಕದಲ್ಲಿ ಅವನನ್ನು ಸ್ಥಾಪಿಸಿ ಅವನ ಮನೆ ಕಾಯುವವನಾದ, ಶ್ರೀಹರಿಯ ಇಂಥ ಅಜಗಜಾಂತರ ರೂಪಗಳು ಅಜನಿಗೂ ಗಜಾಂಬರನಿಗೂ ವಿಸ್ಮಯದಾಯಕವಾಯಿತು.

ಕೆಟ್ಟ ಮೇಲೆ ಬುದ್ಧಿ ಬಂತು. ಸರ್ವರಿಗೂ ಸರ್ವವನ್ನೂ ಕೊಡುವ ಪೂರ್ಣಕಾಮನಾದ ಭಗವಂತನನ್ನು ಬೇಡುವವನೆಂದು ತಿಳಿದು ತಾನು ಧಾರೆಯೆರೆದು ಕೊಡುವವನೆಂದು ಭಾವಿಸಿ ಅಜ್ಞಾನ ಅವಿದ್ಯೆಗಳ ಮೋಹಕ್ಕೆ ಒಳಗಾಗಿ ಅಹಂಕಾರದಲ್ಲಿ ವಿಜೃಂಭಿಸಿ "ಹರಿಯ ಕೈ ಕೆಳಗೆ. ತನ್ನ ಕೈ ಮೇಲೆ" ಎಂದು ಅಭಿಮಾನ ತಾಳಿದ, ಈ ದುರಭಿಸಂಧಿಯ ಫಲಹೊಂದಿ "ಛೀ ಕೆಟ್ಟೆ" ಎಂದ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನ ಎದುರು ತನ್ನದು ಎಂಥಾ ಧೂರ್ತತೆ. ತನ್ನ ತಾತ ಪ್ರಹ್ಲಾದ ಪರೀಕ್ಷೆಗೆ ಒಳಗಾದಾಗಲೂ ಅವನ ಅಪ್ಪ ಹಿರಣ್ಯಕಶಿಪುವಿನೆದುರು ಅಪ್ರಾರ್ಥಿತನಾಗಿ ಅಪ್ರಾಕೃತವಾದ ನರಹರಿರೂಪದಲ್ಲಿ ಕಾಣಿಸಿಕೊಂಡು ಪ್ರಹ್ಲಾದನ ಸತ್ಯವನ್ನು ಕಾದ, ಅಂಥಾ ತಾತ ಈಗ ತಾನು ಮಾಡಿದ ಕ್ಷುದ್ರ ಕೆಲಸದಿಂದ ನಾಚುತ್ತಾ ನಲ್ಲ ಎಂದು ಚಕ್ರವರ್ತಿಯು ಪರಿತಪಿಸಿದ. ಆದರೆ ಶ್ರೀಹರಿಯು ಆತನನ್ನು ಸಂತೈಸಿದ. ಸತ್ಯವಚನನಾಗಿ ಬಲಿಯನ್ನು ಸಂಹರಿಸದೇ ಪರಾಭವಗೊಳಿಸಿದ. ಆದರೂ ಸದಾ ಅವನ ಮನೆಯನ್ನು ಕಾಯುತ್ತಾ ಅವನ ಉತ್ತಮ ಕೆಲಸಕ್ಕಾಗಿ ಅವನಿಗೇ ತನ್ನನ್ನು ತೆತ್ತು ಅವನ ತೊತ್ತಾಗಿ ಸಲಹಿದ. ಎಲ್ಲವೂ ಶ್ರೀಹರಿಯು ಅಚಿಂತ್ಯ, ಅನಿರೀಕ್ಷಿತ ಅದ್ಭುತ ಕರುಣೆ. ಚಕ್ರವರ್ತಿಯು ಬಲೀಂದ್ರನೆಂದು ಹೆಸರಾದ.

ಭಗವಂತ ಬಲೀಂದ್ರನ ಅರಮನೆಯ ದ್ವಾರಪಾಲಕನಾಗಿ ಭೀಮಕಾಯನಾಗಿ ಗದಾಧಾರಿಯಾಗಿ ಬಲಿಯನ್ನು ಕಾಯುತ್ತಾ ನಿಂತ ಆ ಗದಾಧರರೂಪ ನೋಡುವಾಗಲೇ ಎಲ್ಲರಿಗೂ ಭಯ ಹುಟ್ಟಿಸುವಂತಿತ್ತು. ಒಂದು ಸಲ ರಾವಣನು ಶ್ರೀಹರಿಯ ಸಂಗಡ ಯುದ್ಧ ಮಾಡಲು ಅವನನ್ನು ಹುಡುಕಿ ಹುಡುಕಿ ಸಿಗಲಿಲ್ಲವೆಂದು ಭಾವಿಸಿ ಆ ಮಹಾವಿಷ್ಣುವನ್ನು ಹೇಡಿಯೆಂದು ಜರೆದ. ನಂತರ ತನ್ನ ಕುಲದ ಹಿರಿಯನಾದ ಬಲಿಯನ್ನು ನೋಡಿಕೊಂಡು ಹೋಗಲು ಪಾತಾಳಕ್ಕೆ ಬಂದ, ಬರುತ್ತಲೇ ದ್ವಾರಪಾಲಕನನ್ನು ನೋಡಿ ಹೆದರಿದ, ಎದೆಕುಂದಿದ, ಆ ಬಾಗಿಲನ್ನು ಬಿಟ್ಟು ಬೇರೆ ಬಾಗಿಲಿಂದ ಒಳಹೋಗಿ ಬಲಿಯ ಸಂಗಡ ತನ್ನ ಪೌರುಷ ಕೊಚ್ಚುತ್ತ ದ್ವಾರಪಾಲಕನಾರೆಂದು ವಿಚಾರಿಸಿ ಶ್ರೀಹರಿಯೆಂದು ತಿಳಿದ. ಆದರೆ ಯುದ್ಧಕ್ಕೆ ಸಿದ್ಧನಾಗುವ ಬದಲು ಕಳ್ಳದಾರಿಯಲ್ಲಿ ಪರಾರಿಯಾದನಂತೆ. ಶ್ರೀಹರಿಯ ನಿಲುವಿನ ಭಂಗಿಯೇ ರಾವಣನನ್ನು ಪುಕ್ಕಲು ಜೀವಿಯಾಗಿ ಮಾಡಿ ಪರಾರಿಯಾಗುವಂತೆ ಮಾಡಿತು, ಬಲೀಂದ್ರನು ತನ್ನ ಭಕ್ತಿಯಿಂದ ತನ್ನ ಮೊದಲಿನ ತಪ್ಪನ್ನು ತಿಳಿದು ಹರಿಯಲ್ಲಿ ಕ್ಷಮೆ ಬೇಡಿ ಕೃತಜ್ಞನಾಗಿ ಬದುಕಿದ. ಇಂದಿಗೂ ಭೂಮಿಯಲ್ಲಿ ಬಲೀಂದ್ರನಿಗೆ ವಿಷ್ಣುವಿನ ಜತೆಯಲ್ಲಿ ಪೂಜೆ ಸಲ್ಲುವುದಾಗಿದೆ, ದೀಪೋತ್ಸವ ಸಲ್ಲುತ್ತದೆ. ಶ್ರೀಹರಿಯ ಸಂಗಡ ತನ್ನ ಹಿಂದಿನ ಭೂಸಾಮ್ರಾಜ್ಯಕ್ಕೆ ಬಂದು ನೋಡಿಕೊಂಡು ಹೋಗುವನಂತೆ. ಹೂವ ತರುವರ ಮನೆಗೆ ಹುಲ್ಲು ತರುವ ಶ್ರೀಹರಿಗೆ ಅನಂತ ಪ್ರಣಾಮಗಳು. ★



# ಪ್ರತಿವಾದಿ ಭಯಂಕರ ಅಣ್ಣಂಗರಾಚಾರ್ಯರ ನಿಧನ

ಶ್ರೀ ವೆಂಕಟೇಶ್ವರಸ್ವಾಮಿ ಸುಪ್ರಭಾತದ ಕರ್ತೃವಾದ ಪ್ರತಿವಾದಿಭಯಂಕರ ಅಣ್ಣನ್‌ಸ್ವಾಮಿ ವಂಶದಲ್ಲಿ ಹುಟ್ಟಿದ ಒಬ್ಬ ಅವತಾರ ಪುರುಷ "ಪ್ರತಿವಾದಿ ಭಯಂಕರ ಅಣ್ಣಂಗರಾಚಾರ್ಯ ಸ್ವಾಮಿಯವರು". ಇವರ ಜನ್ಮನಾಮ ಹಸ್ತ್ಯದ್ರಿನಾಥ. ಕಂಚಿಯಲ್ಲಿ 94 ವರ್ಷಗಳಕಾಲ ಜೀವಿಸಿದ್ದು. ಮಹಾಮಾನವ ಕಾರ್ಯಗಳನ್ನು ನಿರ್ವಹಿಸಿ ಅಸಂಖ್ಯ ಗ್ರಂಥಗಳನ್ನು ರಚಿಸಿ ಪ್ರಸಿದ್ಧರಾಗಿ ಈಚೆಗೆ ಶ್ರೀನಿವಾಸನ ಪದಕಮಲಗಳನ್ನು ಸೇರಿದರು.

ಕಂಚಿಯಲ್ಲಿ ಶಠಗೋಪಸಿಲಯವೆಂಬ ಹಿರಿಯ ಸಂಸ್ಕೃತ ಪಾಠಶಾಲೆ. ಅಲ್ಲಿ ಅಣ್ಣಂಗರಾಚಾರ್ಯ ಸ್ವಾಮಿಗಳ ತಂದೆ ಹಿರಿಯ ಆಚಾರ್ಯರಾಗಿದ್ದರು. ಅವರಿಂದ ಸಾಹಿತ್ಯ. ಅಲಂಕಾರ ಸಾಮಾನ್ಯಶಾಸ್ತ್ರಗಳನ್ನು ಅಭ್ಯಾಸಮಾಡಿದರು ಅಣ್ಣಂಗರಾಚಾರ್ಯರು. ಭಗವದ್ವಿಷಯದಲ್ಲಿ (ತಿರುವಾಯ್‌ಮೊಳಿ) ದ್ರಾವಿಡ ವೇದಾಂತದಲ್ಲಿ ಸಂಗೀತದಲ್ಲಿ ಮಹಾವಿದ್ವಾಂಸರಾದ 'ಸೌಮ್ಯ ಜಾಮಾತೃಯೋಗಿ' ಎಂದು ಪ್ರಸಿದ್ಧರಾದ ಯತೀಶ್ವರರಾದ ತಮ್ಮ ಸೋದರ ಮಾವನಿಂದ ದ್ರಾವಿಡ ವೇದಾಂತವನ್ನು ರಹಸ್ಯ ತತ್ತ್ವಾರ್ಥಗಳನ್ನು ಅಭ್ಯಾಸಮಾಡಿದರು. ಜಗದ್ಗುರು ಗಾವಿ ಅನಂತಾಚಾರ್ಯ ಸ್ವಾಮಿಯವರ ಬಳಿಕುಳಿತು ಸಂಸ್ಕೃತ ವೇದಾಂತ ಕಾಲಕ್ಷೇಪ ಮಾಡಿ ಅವರೊಂದಿಗೆ ಉತ್ತರಭಾರತ ಯಾತ್ರೆಮಾಡಿ ಆ ಕಾಲದಲ್ಲೇ 'ಮಂಜುಭಾಷಿಣಿ' ಎನ್ನುವ ಸಂಸ್ಕೃತ ಪತ್ರಿಕೆಗೆ ಸಹಕಾರವನ್ನು ನೀಡಿದರು. ತಮ್ಮ 18ನೇ ವಯಸ್ಸಿನಲ್ಲೇ 'ನಾಲಾಯಿರ ದಿವ್ಯ ಪ್ರಬಂಧ' ಗಳಿಗೆ 'ದಿವ್ಯಾರ್ಥ ದೀಪಿಕಾ' ಎಂಬ ವ್ಯಾಖ್ಯಾನವನ್ನು ಮುದ್ರಿಸಿ ಪ್ರಕಟಿಸಿದರು. ಸಕಲ ಪೂರ್ವಾಚಾರ್ಯ ಸ್ತೋತ್ರಗಳಿಗೆ ವ್ಯಾಖ್ಯಾನವನ್ನು ತಮಿಳು, ತೆಲುಗು ಸಂಸ್ಕೃತಗಳಲ್ಲಿ ಬರೆದು ಪ್ರಕಟಿಸಿದರು.

ನಾಲ್ಕು ಭಾಷೆಗಳಲ್ಲೂ ಪ್ರಕಾಂಡ ಪಂಡಿತರಾಗಿದ್ದ ಇವರು ನಾಲ್ಕು ಭಾಷೆಗಳಲ್ಲೂ ಶ್ರೇಷ್ಠ ಉಪನ್ಯಾಸಕರಾಗಿದ್ದರು. ನಾಲ್ಕು ಭಾಷೆಗಳಲ್ಲೂ ನಾಲ್ಕು ಪತ್ರಿಕೆಗಳನ್ನು ನಿರ್ವಹಿಸಿದರು. 'ರಾಮಾನುಜಪತ್ರಿಕೆ' ಎಂಬ ತೆಲುಗು ಸಂಚಿಕೆ ಸುಮಾರು 30 ವರ್ಷ ಆಂಧ್ರ ಪ್ರದೇಶದ ಆಸ್ತಿಕರಿಗೆ ಸದಸದ್‌ವಿವೇಕವನ್ನು ನೀಡುತ್ತಿದ್ದಿತು ಎಂದರೆ ಅತಿಶಯೋಕ್ತಿಯಲ್ಲ ಭದ್ರಾಚಲ, ಸಿಂಹಾಚಲ, ವಿಜಯನಗರಂ ಹೈದರಾಬಾದುಗಳಲ್ಲಿ ಇವರ ಉಪನ್ಯಾಸಗಳನ್ನು ಅಸಂಖ್ಯ ಶ್ರೋತೃಗಳು ಕೇಳಿ ಆನಂದಿಸುತ್ತಿದ್ದರು. ಅನೇಕ ತೀರ್ಥಕ್ಷೇತ್ರಗಳಲ್ಲಿ ಹಾಗೂ ದೆಹಲಿ, ಬೊಂಬಾಯಿ ಮೊದಲಾದ ಉತ್ತರಭಾರತ ನಗರಗಳಲ್ಲಿ ಭಕ್ತರೊಂದಿಗೆ ಯಾತ್ರೆ ಹೊರಟು ವೇದಾಂತ ವಿಷಯವನ್ನು ಪ್ರಚಾರ ಮಾಡುತ್ತಿದ್ದರು. ತೆಲುಗು ಲಿಪಿಯಲ್ಲಿ 'ಭಗವದ್ರಾಮಾನುಜ ಗ್ರಂಥಮಾಲೆ' ಎನ್ನುವ ಗ್ರಂಥವನ್ನು ಪ್ರಕಟಿಸಿದರು. ತೆಲುಗು ಸಂಸ್ಕೃತ ಲಿಪಿಗಳಲ್ಲಿ ಕಾವ್ಯನಾಟಕ ವಿಭಾಗ, ಸ್ತೋತ್ರವಿಭಾಗ, ಸಂಪ್ರದಾಯ ವಿಭಾಗ, ವ್ಯಾಖ್ಯಾನ ವಿಭಾಗ, ವೇದಾಂತ ವಿಭಾಗ ಎಂದು ಎಂಬ ವ್ಯಾಪಕವಿಭಾಗಗಳನ್ನು ಹೊಂದಿದಂತಹ 'ಶ್ರೀಮದ್ ವೇದಾಂತದೇಶಿಕ ಗ್ರಂಥಮಾಲೆ' ಎನ್ನುವ ಸಮಗ್ರ ಗ್ರಂಥವನ್ನು ಪ್ರಕಟಿಸಿದರು. ಈ ವಿಧದಲ್ಲಿಯೇ ತೆಲುಗು ಲಿಪಿಯಲ್ಲಿ ಮಣವಾಳ ಮಾಮುನಿಗಳ ಸಮಗ್ರ ಕೃತಿಗಳನ್ನು 'ವರವರ ಮುನೀಂದ್ರ ಗ್ರಂಥಮಾಲೆ' ಎನ್ನು ಹೆಸರಿನಲ್ಲಿ ಪ್ರಕಟಿಸಿದರು. ಇವೇ ಅಲ್ಲದೆ ಅನೇಕ ಸ್ವತಂತ್ರ ಕೃತಿಗಳು ಅನುವಾದ ಕೃತಿಗಳು, ವಾದವಿವಾದ ಕೃತಿಗಳು, ರಹಸ್ಯಾರ್ಥ ನಿರ್ದೇಶಕ ಕೃತಿಗಳು – ಮೊದಲಾಗಿ ಅಸಂಖ್ಯ ಕೃತಿಗಳನ್ನು ಸರಳ ಸುಲಭ ಶೈಲಿಯಲ್ಲಿ ಆನಂದಕರವಾಗುವಂತೆ ರಚಿಸಿ, ಸಾಹಿತ್ಯ ಹಾಗೂ ಧಾರ್ಮಿಕ ಸೇವೆ ಮಾಡಿದರು. ಇವರ 1500 ಕ್ಕೂ ಮಿಕ್ಕಿದ ಮುದ್ರಿತ ಕೃತಿಗಳಲ್ಲಿ ಇಂದು ನೂರಾರು ಕೃತಿಗಳು ಅಲಭ್ಯವಾಗಿವೆ.

ಇವರ ಪ್ರತಿಭಾ ವಿಶೇಷವನ್ನು ಗಮನಿಸಿದ ಶಿವಾನಂದ ಸರಸ್ವತಿಸ್ವಾಮಿಗಳ ಇವರನ್ನು ಶ್ಲಾಘಿಸಿ 'ವ್ಯಾಖ್ಯಾನ ವಾಚಸ್ಪತಿ' ಎಂಬ ಬಿರುದನ್ನು ನೀಡಿದರು. ಕಾಶಿ ಪ್ರಯಾಗ ಮೊದಲಾದ ಪ್ರಾಂತಗಳ ಪ್ರಮುಖ ವಿದ್ವಾಂಸರು ಅಲಹಾಬಾದಿನಲ್ಲಿ ಸಭೆ ಸೇರಿ ಇವರ ಪಾಂಡಿತ್ಯ ಪ್ರತಿಭೆಗಳಿಗೆ ಗೌರವ ಸಲ್ಲಿಸುತ್ತ 'ಮಹಾಮಹೋಪಾಧ್ಯಾಯ' ಎಂಬ ಬಿರುದನ್ನು ನೀಡಿದರು.

ಅನೇಕ ವರ್ಷಗಳ ಕಾಲ ಮದರಾಸಿನಲ್ಲಿ ಭಾನುವಾರಗಳಂದು ಪ್ರತಿವರ್ಷ ಧನುರ್ಮಾಸದಲ್ಲಿ ತಿರುಪ್ಪಾವೈ, ರಾಮಾಯಣ, ತಿರುವಾಯ್‌ಮೊಳಿ, ಗೀತೆ ಮೊದಲಾದ ಕೃತಿಗಳ ಬಗ್ಗೆ ಉಪನ್ಯಾಸಗಳನ್ನು ನೀಡುತ್ತಿದ್ದರು.

(39 ನೇ ಪುಟ ನೋಡಿ)

ಮಾರಾಟಕ್ಕೆ ಸಿದ್ಧವಾಗಿವೆ

ತಾಮ್ರ ಚಿತ್ರಪಟಗಳು

## ಶ್ರೀ ವೇಂಕಟೇಶ್ವರಸ್ವಾಮಿ

ಹಾಗೂ

## ಶ್ರೀ ಪದ್ಮಾವತೀ ಅಮ್ಮನವರ

ಆಕರ್ಷಕ ತಾಮ್ರಚಿತ್ರಗಳ ಫಲಕಗಳು

ಸುಲಭ ಬೆಲೆಯಲ್ಲಿ ದೀರ್ಘಕಾಲ

ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು

**ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ**

**ದೊರೆಯುತ್ತವೆ.**

37ನೇ ಪುಟದಿಂದ)

ಜನ ಈ ಉಪನ್ಯಾಸಗಳಿಂದ ಮುಗ್ಧರಾಗುತ್ತಿದ್ದರು. ಮಾರ್ಗಶಿರ ಮಾಸದಲ್ಲಿ ಶ್ರೀರಂಗದಲ್ಲಿ ನಡೆಯುವ ಅರಯರ್ ಸೇವೆಯಂತೆಯೇ ಮದರಾಸಿನಲ್ಲೂ ಸಹ ಅರಯರ್ ಸೇವೆಯನ್ನು ಅದ್ಭುತವಾಗಿ ನಿರ್ವಹಿಸಿದರು.

ಸುಮಾರು 80 ವರ್ಷಗಳಕಾಲ ಕಂಚಿಯಲ್ಲಿನ ಶ್ರೀ ವರದರಾಜಸ್ವಾಮಿಯವರಿಗೆ ನಿತ್ಯ ನೈಮಿತ್ತಿಕ ಉತ್ಸವಾದಿಗಳನ್ನು ನಿಯತವಾಗಿ ನಡೆಸಿದ ಇವರ ಸೇವೆ ವಾಚಾಮಗೋಚರವಾದದ್ದು.

ಮೂಲ :

**ಶ್ರೀ ಕೆ. ತಿರುವೆಂಗಡಮ್.**

# ವಾರ್ತಾಲಹರಿ

## ವಿಕಲಾಂಗ ಶಿಕ್ಷಣ ತರಬೇತಿ ಕೇಂದ್ರ ನಿರ್ದೇಶಕರ ನೇಮಕಾತಿ

ತಿರುಪತಿಯಲ್ಲಿನ ತಿ. ತಿ. ದೇವಸ್ಥಾನಗಳ ಯಾಜಮಾನ್ಯದ ವಿಕಲಾಂಗ ಶಿಕ್ಷಣ–ತರಬೇತಿ ಕೇಂದ್ರದ ನಿರ್ದೇಶಕರಾಗಿ ತಿ. ತಿ. ದೇವಸ್ಥಾನಗಳ ಹಿರಿಯ ವೈದ್ಯಾಧಿಕಾರಿ ಡಾ|| ವೈ. ಆರ್. ಧನಲಕ್ಷ್ಮಿ ಅವರನ್ನು ನೇಮಕ ಮಾಡಲಾಗಿದ್ದು ಅವರು ಈ ಹುದ್ದೆಯನ್ನು ಸ್ವೀಕರಿಸಿದ್ದಾರೆ.

ವಿಕಲಾಂಗ ಶಿಕ್ಷಣ ತರಬೇತಿ ಕೇಂದ್ರ ಯಶಸ್ವಿಯಾಗಿ ಕೆಲಸಮಾಡುತ್ತ ಹಲವು ಬಗೆಯ ಉತ್ಪಾದನೆಗಳ ಬಗ್ಗೆ ವಿಕಲಾಂಗರಿಗೆ ತರಬೇತಿಯನ್ನು ನೀಡುತ್ತದೆ. ತಿ. ತಿ. ದೇವಸ್ಥಾನಗಳ ವಿವಿಧ ವಿಭಾಗಗಳಿಗೆ ಅಗತ್ಯವಾದ ಕುರ್ಚಿಗಳನ್ನು ಇಲ್ಲಿಂದಲೇ ಪಡೆಯುವ ಆಲೋಚನೆಯೂ ಇದೆ. ಕುರ್ಚಿಗಳಿಗೆ ವೈರ್ ಹಾಕುವ ಕೆಲಸದ ಬಗ್ಗೆ ಇಲ್ಲಿ ತರಬೇತಿ ನೀಡಲಾಗುತ್ತಿದೆ.

## ಶ್ವೇತ ಛತ್ರ ಮೆರವಣಿಗೆ

ತಿ. ತಿ. ದೇವಸ್ಥಾನಗಳ ವಾರ್ಷಿಕ ಬ್ರಹ್ಮೋತ್ಸವಕ್ಕೆ ಪ್ರತಿವರ್ಷವೂ ಶ್ವೇತ ಛತ್ರಗಳನ್ನು ನೀಡುವ ಮದರಾಸಿನ ತಿರುಪತಿ ಅಂಬ್ರೆಲಾ ಛಾರಿಟೀಸ್ ಸಂಸ್ಥೆ ಈ ವರ್ಷದ ಬ್ರಹ್ಮೋತ್ಸವದ ಅಂಗವಾಗಿ ಮದರಾಸಿನಲ್ಲಿ ಶ್ವೇತಛತ್ರಗಳ ಮೆರವಣಿಗೆಯನ್ನು ಏರ್ಪಡಿಸಿದೆ. ಮದರಾಸಿನ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಟಿ. ಎಸ್. ಸಿಂಗಾರವೇಲು ಅವರ ಉಪಸ್ಥಿತಿಯಲ್ಲಿ ಆಗಸ್ಟ್ 10 ರಂದು ಸಂಜೆ 6 ಗಂಟೆಗೆ ಆರಂಭವಾಗುವ ಛತ್ರಪೂಜೆ, 6–9–83 ರಂದು ಮೆರವಣಿಗೆಯಲ್ಲಿ ಹೊರಟು 14–9–83 ರ ಬ್ರಹ್ಮೋತ್ಸವದ ಗರುಡೋತ್ಸವದ ಹೊತ್ತಿಗೆ ತಿರುಮಲೆಯನ್ನು ಸೇರುವುದೆಂದು ವರದಿಗಳು ತಿಳಿಸುತ್ತವೆ.

1983

## ಅಕ್ಟೋಬರ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 2 | ಭಾನುವಾರ | ಗಾಂಧೀ ಜಯಂತಿ |
| 6 | ಗುರುವಾರ | ಮಹಾಲಯ ಅಮಾವಾಸ್ಯೆ |
| 7 | ಶುಕ್ರವಾರ | ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಆರಂಭ |
| 11 | ಮಂಗಳವಾರ | ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಗರುಡೋತ್ಸವ |
| 12 | ಬುಧವಾರ | ಸರಸ್ವತೀ ಪೂಜೆ |
| 14 | ಶುಕ್ರವಾರ | ದುರ್ಗಾಷ್ಟಮಿ, ಶ್ರೀ ವೆಂಕಟೇಶ್ವರಸ್ವಾಮಿ ರಜತ ರಥೋತ್ಸವ, ಮಹಾನವಮಿ, ಆಯುಧ ಪೂಜೆ |
| 15 | ಶನಿವಾರ | ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಅವಭೃತ |
| 16 | ಭಾನುವಾರ | ವಿಜಯದಶಮಿ |
| 21 | ಶುಕ್ರವಾರ | ಸುವರ್ಣಮುಖಿ ತೀರ್ಥ ಮುಕ್ಕೋಟಿ |
| 28 | ಶುಕ್ರವಾರ | ತಿರುಮಲೆನಂಬಿ ಉತ್ಸವಾರಂಭ |
| 30 | ಭಾನುವಾರ | ಮಣವಾಳ ಮಹಾಮುನಿ ಉತ್ಸವಾರಂಭ |

**ಮುಂದಿನ ಸಂಚಿಕೆಯಲ್ಲಿ .... .... ....**

**ಸಪ್ತಗಿರಿ ಅಕ್ಟೋಬರ್ — 1983**

**ಮಹಾಕವಿ ಭಾರವಿ**
— ಎಂ ವಿ. ಸಂಪತ್ಕುಮಾರಾಚಾರ್ಯ

**ಅಭಯಪ್ರದಾನ**
— ಡಿ. ಕೃಷ್ಣ ಅಯ್ಯಂಗಾರ್

**ಜಾನಪದ ಸಾಹಿತ್ಯದಲ್ಲಿ ನಾರಿ**
— ರಾಧಾಜೋಷಿ ಕೋಡ್ಲಿ

**ಭದ್ರಾಚಲ ರಾಮದಾಸರು**
— ಪ್ರೇಮಲೀಲಾ ನಾರಾಯಣಮೂರ್ತಿ

**ಬಸವೇಶ್ವರ**
— ಎ.ಎಸ್. ಶಂಕರ

**ನೀತಿ ಶತಕಗಳು**
— ಶ್ರೀನಿವಾಸಮಠದ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಬರೆಯಿರಿ.

ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ಸಪ್ತಗಿರಿ ಮಾಸಪತ್ರಿಕೆಯ ಬಹುಮಾನಿತ ಏಜಂಟರುಗಳು

ಸಪ್ತಗಿರಿ ಮಾಸ ಪತ್ರಿಕೆಯ ಏಜಂಟರುಗಳಲ್ಲಿ ಅತಿಹೆಚ್ಚಿನ ಸಂಖ್ಯೆಯ ಪ್ರತಿಗಳನ್ನು ಮಾರಾಟ ಮಾಡುವ ಏಜಂಟರನ್ನು ಪ್ರೋತ್ಸಾಹಿಸುವ ಬಹುಮಾನ ಸಂಪ್ರದಾಯವಿರುವುದು ಸರಿಯಷ್ಟೆ. ಅದರಂತೆ 500 ಕ್ಕೂ ಮಿಕ್ಕಿದಂತೆ ಅತಿ ಹೆಚ್ಚಿನ ಪ್ರತಿಗಳನ್ನು ಮಾರಾಟ ಮಾಡಿದ ತೆಲುಗು, ತಮಿಳು ಭಾಷೆಗಳ ಏಜಂಟರುಗಳಿಗೆ ಶ್ರೀವೆಂಕಟೇಶ್ವರಸ್ವಾಮಿಯ ಬೆಳ್ಳಿಯ ಪದಕಗಳ ಬಹುಮಾನ ನೀಡಲಾಗಿದೆ. 1983ರಲ್ಲಿ ಬಹುಮಾನಪಡೆದ ಏಜಂಟುಗಳೆಂದರೆ ವರಂಗಲ್‌ನ ಶ್ರೀ ಎ. ರಂಗಾಚಾರ್ಯ (ತೆಲುಗು 1082 ಪ್ರತಿಗಳು) ಹಾಗೂ ಮೈಲಾಪುರದ ಶ್ರೀ ಎ. ಟಿ. ಕೃಷ್ಣನ್ (ತಮಿಳು 709 ಪ್ರತಿಗಳು.)

ಹತ್ತು ಗ್ರಾಂ ತೂಕದ ಶ್ರೀ ವೆಂಕಟೇಶ್ವರಸ್ವಾಮಿಯ ಬೆಳ್ಳಿಯ ಪದಕಗಳನ್ನು ಈ ಏಜಂಟರುಗಳಿಗೂ ವೆಲ್‌ಫೇರ್ ಆಫೀಸರ್ ಅವರು ಕಳುಹಿಸಿಕೊಡುವರು. ಕನ್ನಡ, ಹಿಂದಿ, ಆಂಗ್ಲ ಭಾಷೆಗಳಲ್ಲಿ ಯಾವ ಏಜಂಟರೂ ಐನೂರಕ್ಕೂ ಮೀರಿ ಪ್ರತಿಗಳನ್ನು ಮಾರಾಟ ಮಾಡಿಲ್ಲವಾಗಿ ಬಹುಮಾನವನ್ನು ತಡೆಹಿಡಿಯಲಾಗಿದೆ.

## ರಕ್ಷಾಪತ್ರ ಚಿತ್ರಸೂಚಿ

ಮುಖ ಪುಟದಲ್ಲಿ: ಶ್ರೀ ವೆಂಕಟೇಶ್ವರ ಸ್ವಾಮಿಯ ಉತ್ಸವ ಮೂರ್ತಿ.

ಹಿಂಬದಿಯ ಪುಟ: ಗಣಪತಿ
ಚಿತ್ರ: ಕೆ. ಜಗದೀಶ್.

ಒಳ ಪುಟಗಳಲ್ಲಿ: 1. ಶ್ರೀ ವೆಂಕಟೇಶ್ವರ ಸ್ವಾಮಿ ಬ್ರಹ್ಮೋತ್ಸವದ ಗರುಡೋತ್ಸವ. 2. ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವದಲ್ಲಿನ ಊಂಜಲ್‌ಸೇವೆ.

ಆಗಸ್ಟ್ ಸಂಚಿಕೆಯಲ್ಲಿ ಮುಖಚಿತ್ರ ನವನೀತಕೃಷ್ಣ ಹಿಂಬದಿಯಲ್ಲಿ ಭೂವರಾಹ ವಿದ್ದು ಆದ ಪ್ರಮಾದಕ್ಕೆ ವಿಷಾದ ಸೂಚಿಸುತ್ತವೆ–ಸಂ||

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

